1954

ಯೇ ನಾಮ ಕೇಚಿದಿಹ ನಃ ಪ್ರಥಯನ್ತ್ಯವಜ್ಞಾಂ
ಜಾನನ್ತಿ ತೇ ಕಿಮಪಿ ತಾನ್ ಪ್ರತಿ ನೈಷ ಯತ್ನಃ ।
ಉತ್ಪತ್ಸ್ಯತೇ ಮಮ ತು ಕೋಽಪಿ ಸಮಾನಧರ್ಮಾ
ಕಾಲೋ ಹ್ಯಯಂ ನಿರವಧಿಃ ವಿಪುಲಾ ಚ ಪೃಥ್ವೀ ॥

— ಭವಭೂತಿ (ಮಹಾವೀರಚರಿತೆ । ೪)

—: ಮುದ್ರಕರು: —
೧. ಸಂಸ್ಕೃತ ಸಾಹಿತ್ಯ ಸದನ, ಮೈಸೂರು.
೨. ಕೆ. ವಿ. ವಿ. ಪ್ರೆಸ್ ಮೈಸೂರು.

# ಪೀಠಿಕೆ

ಕಾವ್ಯಗಳಲ್ಲಿ ಎರಡು ವಿಧ—೧ ಶ್ರವ್ಯ, ೨ ದೃಶ್ಯ. ಗದ್ಯ ಮತ್ತು ಪದ್ಯ ಕಾವ್ಯಗಳು ಮೊದಲನೆಯ ಗುಂಪಿಗೂ, ರಂಗಭೂಮಿಯ ಮೇಲೆ ಅಭಿನಯಿಸಿ ಕಣ್ಣಿಂದ ನೋಡಲು ಸಾಧ್ಯವಾದ ಕೃತಿಗಳು ಎರಡನೆಯ ಗುಂಪಿಗೂ ಸೇರಿದುವು. ಈ ದೃಶ್ಯಕಾವ್ಯಗಳನ್ನು ಮುಖ್ಯವಾಗಿ ರೂಪಕ ಉಪರೂಪಕ ಎಂಬ ಎರಡು ಪಂಗಡಗಳಾಗಿ ವಿಭಾಗಿಸಿದ್ದಾರೆ. [1] ರೂಪಕಗಳಲ್ಲಿ ಹತ್ತು ಬಗೆಯೂ [2] ಉಪರೂಪಕಗಳಲ್ಲಿ ಹದಿನೆಂಟು ಬಗೆಯೂ ಇವೆ. **ನಾಟಕವು** ಒಂದು ಬಗೆಯ ರೂಪಕವಾದರೂ, ಉಳಿದ ಒಂಭತ್ತು ಬಗೆಯ ರೂಪಕಗಳೂ, ಮತ್ತು ಉಪರೂಪಕಗಳೂ ಅಷ್ಟು ಪ್ರಸಿದ್ಧವಾಗಿಲ್ಲವಾದುದರಿಂದ, ಪ್ರಾಯಃ ಎಲ್ಲಾ ಬಗೆಯ ದೃಶ್ಯಕಾವ್ಯಗಳಿಗೂ **ನಾಟಕ** ಎಂಬ ಹೆಸರೇ ಇತ್ತೀಚೆಗೆ ಕನ್ನಡದಲ್ಲಿ ಬಳಕೆಗೆ ಬಂದಿದೆ.

## ಗ್ರಂಥಕರ್ತೃ ವಿಚಾರ

ಐದು ಅಂಕಗಳುಳ್ಳ ನಾಗಾನಂದನಾಟಕವೂ ಮತ್ತು ನಾಲ್ಕು ಅಂಕಗಳುಳ್ಳ ರತ್ನಾವಳೀ, ಪ್ರಿಯದರ್ಶಿಕೆ ಎಂಬ ಎರಡು [3]ನಾಟಿಕೆಗಳೂ ಶ್ರೀ ಹರ್ಷವಿರಚಿತವಾದುವೆಂಬುದು ಪ್ರಸಿದ್ಧವಾಗಿದೆ. ಆದರೂ, (೧) ಈ ಶ್ರೀಹರ್ಷನು ಯಾರು ? (೨) ಈ ಮೂರು ಕೃತಿಗಳನ್ನೂ ಆತನೇ ರಚಿಸಿದನೇ, ಅಥವಾ ಬೇರೆ ಯಾರಾದರೂ ರಚಿಸಿ ಶ್ರೀಹರ್ಷನ ಹೆಸರಿನಲ್ಲಿ ಪ್ರಚುರಪಡಿಸಿದರೇ ?—ಎಂಬಂಶದಲ್ಲಿ ಸಂದೇಹ ತಲೆತೋರಲು ಅವಕಾಶವಿಲ್ಲದೆ ಇಲ್ಲ.

---

[1] ರೂಪಕಗಳು ಹತ್ತು—ನಾಟಕ, ಪ್ರಕರಣ, ಭಾಣ, ಪ್ರಹಸನ, ಡಿಮ, ವ್ಯಾಯೋಗ, ಸಮವಾಕಾರ, ವೀಥೀ, ಅಂಕ, ಈಹಾಮೃಗ.

[2] ಉಪರೂಪಕಗಳು ಹದಿನೆಂಟು—ನಾಟಿಕಾ, ತ್ರೋಟಕ, ಗೋಷ್ಠೀ, ಸಟ್ಟಕ, ನಾಟ್ಯರಾಸಕ, ಪ್ರಸ್ಥಾನ, ಉಲ್ಲಾಪ್ಯ, ಕಾವ್ಯ, ಪ್ರೇಂಖಣ, ರಾಸಕ, ಸಂಲಾಪಕ, ಶ್ರೀಗದಿತ, ಶಿಲ್ಪಕ, ವಿಲಾಸಿತ, ದುರ್ಮಲ್ಲಿಕಾ, ಪ್ರಕರಣೀ. ಹಲ್ಲೀಶ, ಭಾಣಿಕಾ.

[3] ನಾಟಿಕೆ—ಇದರ ವಸ್ತು ಕಲ್ಪಿತ; ಅಂಕಗಳು ನಾಲ್ಕು ಇರಬೇಕು. ಸ್ತ್ರೀಪಾತ್ರ ಹೆಚ್ಚು. ನಾಯಕ ಪ್ರಖ್ಯಾತನೂ ಧೀರಲಲಿತನೂ ಆಗಿರಬೇಕು. ಅವಿವಾಹಿತಳಾದ ರಾಜಪುತ್ರಿ ನಾಯಿಕೆ.

## I ಈ ನಾಟಕಗಳನ್ನು ರಚಿಸಿದ ಶ್ರೀಹರ್ಷನು ಯಾರು?

ಹಿಂದೂ ಚರಿತ್ರೆಯಲ್ಲಿ ಶ್ರೀಹರ್ಷ ಎಂಬ ಒಂದೇ ಹೆಸರಿನ ಆರು ಜನರು ಪ್ರಸಿದ್ಧರಾಗಿದ್ದಾರೆ. ಅವರು ಯಾರೆಂದರೆ—

೧. ನೈಷಧಚರಿತ ಎಂಬ ([4] ಪಂಚಮಹಾಕಾವ್ಯಗಳಲ್ಲಿ ಒಂದಾದ) ೨೨ ಸರ್ಗಗಳುಳ್ಳ ಮಹಾಕಾವ್ಯದ ಕರ್ತೃ. ಈತನಕಾಲ ಕ್ರಿ. ಶ. ೧೨ನೆಯ ಶತಮಾನದ ಉತ್ತರಾರ್ಧ. ಈತನ ತಂದೆ ಹೀರಪಂಡಿತ; ತಾಯಿ ಮಾಮಲ್ಲದೇವಿ. ಈತನು ರಾಜನಲ್ಲ; ಕನೋಜಿನ ಅರಸನಾದ ಜಯಚಂದ್ರನಿಂದ ಪೋಷಿತನಾಗಿದ್ದವನು. ಈತನು ತನ್ನ ಕಾವ್ಯದ ಸರ್ಗಗಳ ಕೊನೆಯಲ್ಲಿ ತನ್ನಿಂದ ರಚಿತವಾದ ಇತರ ಎಲ್ಲಾ ಗ್ರಂಥಗಳ ಹೆಸರುಗಳನ್ನೂ ಹೇಳಿಕೊಂಡಿದ್ದಾನೆ. (ಅವುಗಳಲ್ಲಿ ನಮ್ಮ ಮೂರು ನಾಟಕಗಳ ಹೆಸರಿಲ್ಲ.)

೨. ಕಾವ್ಯಪ್ರಕಾಶ ದೀಪಿಕೆಯ ಕರ್ತೃವಾದ ಗೋವಿಂದಥಾಕೂರನ ತಮ್ಮ ಶ್ರೀಹರ್ಷ. ಈತನ ಕಾಲ ೧೫ನೆಯ ಶತಮಾನದ ಉತ್ತರಾರ್ಧ. ಈತನೂ ರಾಜನಲ್ಲ; ಪ್ರಸಿದ್ಧ ವಿದ್ವಾಂಸನೆಂದು ಥಾಕೂರನು ಹೇಳಿರುವುದೆಷ್ಟೋ ಅಷ್ಟೇ.

೩. ಧಾರಾನಗರದ ಶ್ರೀಹರ್ಷ. ಭೋಜಮಹಾರಾಜನ ತಾತ. ಈತನ ಕಾಲ ಕ್ರಿ.ಶ. ೧೦ ನೆಯ ಶತಮಾನದ ಪೂರ್ವಾರ್ಧ.

೪ ಕಾಶ್ಮೀರದ ಶ್ರೀಹರ್ಷದೇವ. ಈತನ ಕಾಲ ಕ್ರಿ.ಶ. ಹನ್ನೊಂದನೆಯ ಶತಮಾನಕ್ಕಿಂತ ಈಚೆಗೆ. ಈತನು ಕವಿ ಎಂಬುದಕ್ಕೆ ಆಧಾರವೇನೂ ಇಲ್ಲ.

೫ ಸು.ಕ್ರಿ.ಪೂ. ೬ ನೆಯ ಶತಮಾನದಲ್ಲಿದ್ದ(?) ಶ್ರೀಹರ್ಷವಿಕ್ರಮಾದಿತ್ಯ[5].

೬ ಶ್ರೀಹರ್ಷವರ್ಧನಶಿಲಾದಿತ್ಯ. ಕ್ರಿಸ್ತ ಶಕ ಏಳನೆಯ ಶತಮಾನದ ಪೂರ್ವಭಾಗ.

ಈ ಆರುಜನ ಹರ್ಷರ ಪೈಕಿ, ನಾಟಕಗಳನ್ನು ರಚಿಸಿದ ಶ್ರೀಹರ್ಷ ಯಾರು?

ವಿಚಾರ—೧. ಕ್ರಿ.ಶ. ಹತ್ತನೆಯ ಶತಮಾನದಲ್ಲಿ ರಚಿತವಾದ **ದಶರೂಪಕ**ದಲ್ಲಿ ಮೇಲೆ ಹೇಳಿದ ಮೂರು ನಾಟಕಗಳ ಪೈಕಿ ಎರಡು ಅಂದರೆ **ರತ್ನಾ**

---

[4] ಕಾಳಿದಾಸನ ರಘುವಂಶ, ಕುಮಾರಸಂಭವ; ಭಾರವಿಯ ಕಿರಾತಾರ್ಜುನೀಯ; ಮಾಘನ ಶಿಶುಪಾಲವಧ; ಶ್ರೀಹರ್ಷನ ನೈಷಧಚರಿತ.

[5] ಈತನು ಕ್ರಿ. ಶ. ಎರಡನೆಯ ಶತಮಾನದವನೆಂದು ಕೆಲವರ ಅಭಿಪ್ರಾಯ. ಭಾಸ (ಧಾವಕ ?)ನು ಈತನ ಆಸ್ಥಾನ ಕವಿಯೆಂಬ ಒಂದು ಮತವುಂಟು.

ವಳಿಯೂ, ನಾಗಾನಂದವೂ ಉದಹರಿಸಲ್ಪಟ್ಟಿವೆ. ಇದಲ್ಲದೆ ಕಾಶ್ಮೀರದ ಜಯಾಪೀಡನ (ಕ್ರಿ.ಶ. ೭೭೯-೮೧೩) ಆಶ್ರಿತನಾಗಿದ್ದ ದಾಮೋದರಗುಪ್ತನು ತನ್ನ ಕುಟ್ಟನೀಮತದಲ್ಲಿ ರತ್ನಾವಳಿಯ ಕಥೆಯನ್ನು ವಿಸ್ತಾರವಾಗಿ ಹೇಳಿರುವುದಲ್ಲದೆ, ಮೊದಲನೇ ಅಂಕದ ೨ನೇ ಶ್ಲೋಕವನ್ನು ಉದಹರಿಸಿ ಆ ನಾಟಕವನ್ನು ಉತ್ತಮವಾದ ಕೃತಿಯೆಂದು ಹೊಗಳಿದ್ದಾನೆ[6]. ಆದ್ದರಿಂದ ಈ ನಾಟಕಗಳು ಎಂಟನೆಯ ಶತಮಾನಕ್ಕೆ ಮುಂಚಿತವಾಗಿಯೇ ರಚಿತವಾಗಿರಬೇಕು. ಹೀಗೆ ಕಾಲದೃಷ್ಟಿಯಿಂದ ಮೇಲ್ಕಂಡ ಆರು ಹರ್ಷರ ಪೈಕಿ ಮೊದಲನೆಯ ನಾಲ್ವರೂ ನಮ್ಮ ನಾಟಕಗಳನ್ನು ರಚಿಸಿದವರಲ್ಲವೆಂದು ಧಾರಾಳವಾಗಿ ಹೇಳಬಹುದು.

೨. ಮೂರು ನಾಟಕಗಳ ಪ್ರಸ್ತಾವನೆಯಲ್ಲೂ (ಒಂದು ನಾಟಕದಲ್ಲಿ ಪ್ರಯೋಗಿಸಿದ ಮಾತನ್ನೇ ಉಳಿದೆರಡು ನಾಟಕಗಳಲ್ಲೂ ಪ್ರಯೋಗಿಸಿ[7]) ನಾಟಕಕಾರನು ಅಧಿರಾಜನಾಗಿದ್ದ ಶ್ರೀಹರ್ಷದೇವನೆಂದು ಹೇಳಿದೆ. ಆರುಜನ ಹರ್ಷರ ಪೈಕಿ ಮೊದಲನೆಯ ಇಬ್ಬರು ರಾಜರಲ್ಲ. ಮೂರು ನಾಲ್ಕನೆಯ ಹರ್ಷರು ಹತ್ತನೆಯ ಶತಮಾನಕ್ಕಿಂತ ಈಚಿನವರು. ನಾಲ್ಕನೆಯವನು ರಾಜನಾದರೂ ಕವಿಯಲ್ಲ. ಆದ್ದರಿಂದ ಈ ನಾಲ್ವರೂ ಮೇಲ್ಕಂಡ ನಾಟಕಗಳನ್ನು ರಚಿಸಿದವರಲ್ಲ ಎಂಬುದು ನಿರ್ವಿವಾದ.

೩. ಶ್ರೀಹರ್ಷವಿಕ್ರಮಾದಿತ್ಯ ಮತ್ತು ಶ್ರೀಹರ್ಷವರ್ಧನ ಇಬ್ಬರು ಉಳಿದಂತಾಯಿತು. ಇತ್ಸಿಂಗನು, "(ಶ್ರೀಹರ್ಷ) ಶಿಲಾದಿತ್ಯನು ಜೀಮೂತವಾಹನನ ಕಥೆಯನ್ನು ನಾಟಕರೂಪವಾಗಿ ರಚಿಸಿ ರಂಗಭೂಮಿಯ ಮೇಲೆ ಅಭಿನಯಿಸುವಂತೆ ಮಾಡಿದನು" ಎಂಬರ್ಥದ ಮಾತುಗಳನ್ನು ಬರೆದಿಟ್ಟಿದ್ದಾನೆ[8]. ಈ ಹರ್ಷ

---

[6] ಅಶ್ಲಿಷ್ಟಸಂಧಿಬಂಧಂ ಸತ್ಪಾತ್ರಸುವರ್ಣಯೋಜಿತಂ ಸುತರಾಮ್ । ನಿಪುಣಪರೀಕ್ಷಕದೃಷ್ಟಂ ರಾಜತಿ ರತ್ನಾವಲೀರತ್ನಮ್॥ [7] ನಾಗಾನಂದದ ಪ್ರಸ್ತಾವನೆ, ಟಿಪ್ಪಣಿ 5,6 ನೋಡಿ

[8] "King S'ilāditya (this was the title of Harṣa) versified the story of Bodhisatva Jimūtavāhana who surrendered himself in place of a Nāga. This version was set to music (lit. string and pipe); he had it performed by a band accompanied by dancing and acting and thus popularised it in his time."—Takakusu, I-tsing P. 163.

ವರ್ಧನನು ಕವಿ ಎಂಬುದಕ್ಕೆ ಎಷ್ಟೋ[9] ಪ್ರಮಾಣಗಳಿವೆ. ಬಾಣನ ಹರ್ಷ ಚರಿತ್ರೆಯಲ್ಲಿರುವ ಮಾತುಗಳೇ[10] ಸಾಕು. ಕ್ರಿಸ್ತಪೂರ್ವದ ಶ್ರೀಹರ್ಷ ವಿಕ್ರಮಾದಿತ್ಯನು ನಾಟಕಕಾರನೆಂಬುದಕ್ಕೆ ಆಧಾರವೇನೂ ಇಲ್ಲ.

ಆದ್ದರಿಂದ ಮೇಲೆ ಹೇಳಿದ ಮೂರು ನಾಟಕಗಳನ್ನೂ ರಚಿಸಿದವನು ಕ್ರಿ.ಶ. ಏಳನೆಯ ಶತಮಾನದ ಶ್ರೀಹರ್ಷವರ್ಧನನೇ ಆಗಿರಬೇಕು[11].

II. **ಈ ನಾಟಕಗಳನ್ನು ಶ್ರೀಹರ್ಷನ ಹೆಸರಿನಲ್ಲಿ ಬೇರೆ ಯಾರಾದರೂ ಬರೆದುಕೊಟ್ಟರೇ ?** ಸಂದೇಹಕ್ಕೆ ಕಾರಣ:—ಕಾಶ್ಮೀರದ ಮಮ್ಮಟನು ಸುಮಾರು ಕ್ರಿ.ಶ. ೧೧೦೦ ರಲ್ಲಿ ರಚಿಸಿದ ಕಾವ್ಯಪ್ರಕಾಶದ (i 2) 'ಕಾವ್ಯಂ ಯಶಸೇ ಅರ್ಥಕೃತೆ....' 'ಕಾಲಿದಾಸಾದೀನಾಮಿವ ಯಶಃ, ಶ್ರೀಹರ್ಷಾದೇಃ ಧಾವಕಾದೀನಾಮಿವ ಧನಮ್....' ಎಂಬುದರ ಮೇಲೆ ವ್ಯಾಖ್ಯಾನಮಾಡುತ್ತಾ ನಾಗೋಜಿ[12] ಎಂಬ ಟೀಕಾಕಾರನು (ಕ್ರಿ. ಶ. ೧೭ ನೆಯ ಶತಮಾನದ ಕೊನೆ) ತನ್ನ 'ಕಾವ್ಯಪ್ರದೀಪೋದ್ಯೋತ' ದಲ್ಲಿ ಹೀಗೆ ಹೇಳಿದ್ದಾನೆ—"ಧಾವಕಃ ಕವಿಃ, ಸ ಹಿ ಶ್ರೀಹರ್ಷನಾಮ್ನಾ ರತ್ನಾವಲೀಂ ಕೃತ್ವಾ ಬಹುಧನಂ ಲಬ್ಧವಾನ್,

---

9 ಶ್ರೀಹರ್ಷ ಇತ್ಯವನಿವರ್ತಿಷು ಪಾರ್ಥಿವೇಷು ನಾಮ್ನೈವ ಕೇವಲಮಜಾಯತ ವಸ್ತುತಸ್ತು । ಗೀರ್ಹರ್ಷ ಏಷ ನಿಜಸಂಸದಿ ಯೇನ ರಾಜ್ಞಾ ಸಂಪೂಜಿತಃ ಕನಕ-ಕೋಟಿಶತೇನ ಬಾಣಃ ॥—ಸೊಡ್ಢಲನ ಉದಯಸುಂದರೀಕಥಾ (೧೦ನೆಯ ಶತಮಾನ)

ಯಸ್ಯಾಶ್ಚೋರಶ್ಚಿಕುರನಿಕರಃ, ಕರ್ಣಪೂರೋ ಮಯೂರಃ,
ಭಾಸೋ ಹಾಸಃ, ಕವಿಕುಲಗುರುಃ ಕಾಲಿದಾಸೋ ವಿಲಾಸಃ ।
**ಹರ್ಷೋ ಹರ್ಷಃ**, ಹೃದಯವಸತಿಃ ಪಂಚಬಾಣಃ ಸ ಬಾಣಃ,
ಕೇಷಾಂ ನೈಷಾ ಕಥಯ ಕವಿತಾಕಾಮಿನೀ ಕೌತುಕಾಯ ?

—ಜಯದೇವ (೧೧ನೆಯ ಶತಮಾನ)

10 ಹರ್ಷಚರಿತ ii ನೋಡಿ — 'ಕಾವ್ಯಕಥಾಸ್ವಪೀತಮಮೃತಮುದ್ವಮಂತಂ ....' 'ಮುಖನಿವಾಸಿನೀಂ ಸರಸ್ವತೀಂ ದಧಾನಂ....' 'ಅಪಿ ಚಾಸ್ಯ ತ್ಯಾಗಸ್ಯಾರ್ಥಿನಃ, ಪ್ರಜ್ಞಾಯಾಃ ಶಾಸ್ತ್ರಾಣಿ, ಕವಿತ್ವಸ್ಯ ವಾಚಃ, ಕೌಶಲಸ್ಯ ಕಲಾ, ನ ಪರ್ಯಾಪ್ತೋ ವಿಷಯಃ....'

11 ಆದರೂ ಈ ಮೂರು ನಾಟಕಗಳ ಪೈಕಿ ಒಂದರಲ್ಲೂ 'ಶ್ರೀಹರ್ಷವರ್ಧನ ರಚಿತ' ಎಂದಿರದೆ, ಎಲ್ಲಾದರಲ್ಲೂ "ಶ್ರೀಹರ್ಷದೇವರಚಿತ" ವೆಂದಿರುವುದು ಗಮನಾರ್ಹ. ಸುಭಾಷಿತ ಗ್ರಂಥಗಳಲ್ಲೂ ಹರ್ಷದೇವ ಎಂದೇ ಇದೆ.

12 ೧೭ನೆಯ ಶತಮಾನ ಮತ್ತು ಅಲ್ಲಿಂದೀಚೆಗೆ ಇನ್ನೂ ಕೆಲವರು ಇದೇರೀತಿ ವ್ಯಾಖ್ಯಾನ ಮಾಡಿದ್ದಾರೆ.

ಇತಿ ಪ್ರಸಿದ್ಧಮ್". ಇದೇ ಮೂಲವಾಗಿ, ಶ್ರೀಹರ್ಷನಿಂದ ವಿಶೇಷ ಹಣ ಪಡೆದು ಧಾವಕನು ಹರ್ಷನ ಹೆಸರಿನಲ್ಲಿ ರತ್ನಾವಳಿಯನ್ನು ಬರೆದುಕೊಟ್ಟನೆಂಬ ಅಭಿಪ್ರಾಯ ಹರಡಿತು. ಆದರೆ ಮಮ್ಮಟನ ಮೂಲವಾಕ್ಯಕ್ಕೆ ಇಷ್ಟು ದೂರ ಅರ್ಥಮಾಡುವುದು ಅಸಂಗತವೆಂದು ತೋರುತ್ತದೆ. ಯಾಕೆಂದರೆ ಶ್ರೀಹರ್ಷ ಕವಿಪೋಷಕನಾಗಿದ್ದನೆಂಬುದು ಪ್ರಸಿದ್ಧ. ಧಾವಕನಿಗೆ ಈತನಿಂದ ಹಣದೊರೆ ತಿರಬಹುದು. ಇಷ್ಟು ಮಾತ್ರಕ್ಕೆ ಧಾವಕನು ರತ್ನಾವಳೀನಾಟಿಕೆಯನ್ನು ಬರೆದು ಹೆಸರನ್ನು ಮಾರಿಕೊಂಡನೆನ್ನುವುದು ಹೇಗೆ? ಸಾಲದುದಕ್ಕೆ ಕಾಶ್ಮೀರದ ಮಾತೃಕೆಗಳಲ್ಲಿ 'ಧಾವಕಾದೀನಾಮಿವ' ಎನ್ನುವುದಕ್ಕೆ 'ಬಾಣಾದೀನಾಮಿವ' ಎಂಬ ಪಾಠಾಂತರವೂ ಇದೆ. ಇದರ ಆಧಾರದ ಮೇಲೆ ಬಾಣನೇ ರತ್ನಾವಳಿ ಯನ್ನು ರಚಿಸಿ ಶ್ರೀಹರ್ಷನ ಹೆಸರಿನಲ್ಲಿ ಹಣದ ಲಾಭಕ್ಕಾಗಿ ಪ್ರಕಾಶಪಡಿಸಿದ ನೆಂಬ ಒಂದು ವಾದವೂ ಉಂಟು. ಆದರೆ ಬಾಣನ ಶೈಲಿ ನಮಗೆ ಚೆನ್ನಾಗಿ ಪರಿಚಿತವಾದುದು. ಆ ಶೈಲಿಗೂ ಈ ನಾಟಕಗಳ ಶೈಲಿಗೂ [13]ಅಜಗಜಾಂತರ. ಆದ್ದರಿಂದಲೇ ಬಾಣನು ಈ ನಾಟಕಗಳನ್ನು ರಚಿಸಿದನೆಂಬ ವಾದ ಪ್ರಬಲ ವಾಗಲಿಲ್ಲ. ಧಾವಕನ ಶೈಲಿ ನಮಗೆ ತಿಳಿಯದು. ಈತನ ಗ್ರಂಥ ಯಾವುದೂ ದೊರೆತಿಲ್ಲ.

ಈ ವಿವಾದದಿಂದ ಸಿದ್ಧಾಂತವೇನೂ ಆಗುವಂತಿಲ್ಲ. ರತ್ನಾವಳೀ ಬಾಣರಚಿತ ವಲ್ಲ ಎಂಬುದೇನೋ ಖಚಿತ. ಧಾವಕನೇ ಬರೆದುದೆನ್ನಲು ಆಧಾರ ಸಾಲದು. ಶ್ರೀಹರ್ಷ ರಚಿಸಲಿಲ್ಲವೆನ್ನಲು ಪ್ರಮಾಣವೇ ಇಲ್ಲ. ಹೀಗಿರುವಾಗ, ಮೂರು ನಾಟಕಗಳ ಪ್ರಸ್ತಾವನೆಯಲ್ಲೂ, ಒಂದರಲ್ಲಿ ಪ್ರಯೋಗಿಸಿದ ವಾಕ್ಯವನ್ನೇ ಉಳಿದೆರಡರಲ್ಲೂ ಪ್ರಯೋಗಿಸಿ, ಕವಿಯೇ ಸ್ವತಃ ತನ್ನ ಹೆಸರನ್ನು ಹೇಳಿ ಕೊಂಡಿರುವಾಗ ಅದರಲ್ಲಿ ಏತಕ್ಕಾಗಿ ಅಪನಂಬಿಕೆ ಪಡಬೇಕು?

ಮೂರು ನಾಟಕಗಳನ್ನೂ ಒಬ್ಬನೇ ಬರೆದನೆಂಬುದರಲ್ಲಿ ಸಂದೇಹಕ್ಕೆ ಅವ ಕಾಶವೇ ಇಲ್ಲ. ಪ್ರಸ್ತಾವನೆಯ ಬಹುಭಾಗ (ಶ್ರೀಹರ್ಷೋ ನಿಪುಣಃ ಕವಿಃ ಎಂಬ ಶ್ಲೋಕವೂ ಸೇರಿ) ಮೂರು ನಾಟಕಗಳಲ್ಲೂ ಒಂದೇ ಆಗಿದೆ. ಕೆಲವು ಶ್ಲೋಕಗಳು, ಮಾತುಗಳು, ಭಾವಗಳು ಮೂರು ನಾಟಕಗಳಲ್ಲೂ ಪುನರುಕ್ತ

---

13 ಆದರೆ ಬಾಣನ ಕಾದಂಬರಿಯಲ್ಲಿರುವ ಕೆಲವು ವರ್ಣನೆಗಳಿಗೂ ಈ ನಾಟಕಗಳಲ್ಲಿರುವ ಕೆಲವು ವರ್ಣನೆಗಳಿಗೂ ತುಂಬಾ ಹೋಲಿಕೆ ಇದೆ. ನಾಗಾನಂದ ಟಿಪ್ಪಣಿ I೧೦, I೪೦ 27 ನೋಡಿ.

ವಾಗಿವೆ. ಒಂದೇ ಶೈಲಿ, ಒಂದೇ ಬಗೆಯ ಪ್ರಾಕೃತಭಾಷೆ, ಒಂದೇ ರೀತಿಯ ಸನ್ನಿವೇಶ, ಸಮಾನವಾದ ವರ್ಣನೆ ಮೂರು ನಾಟಕಗಳಲ್ಲೂ ಕಂಡುಬರುತ್ತವೆ. ಆದ್ದರಿಂದ ಈ ನಾಟಕಗಳು ಏಕಕರ್ತೃಕವಾದುವು. ನಾಟಕಗಳ ಪ್ರಸ್ತಾವನೆಯಲ್ಲೇ ಹೇಳಿರುವಂತೆ ಆ ನಾಟಕಕಾರನು ಶ್ರೀಹರ್ಷಮಹಾರಾಜ. ನಾಗಾನಂದ ನಾಟಕವನ್ನು ಶ್ರೀಹರ್ಷನು ರಚಿಸಿ ಆಡಿಸಿದನೆಂಬ ಇತ್ಸಿಂಗನ ಮಾತು ಈ ಸಿದ್ಧಾಂತಕ್ಕೆ ಪೋಷಕವಾಗಿದೆ.[8]

**ಶ್ರೀ ಹರ್ಷನ ಕಾಲ, ವೃತ್ತ, ಕೃತಿಗಳು**—ಶ್ರೀ ಹರ್ಷನ ಪೂರ್ತಾ ಹೆಸರು ಶ್ರೀಹರ್ಷವರ್ಧನ ಶಿಲಾದಿತ್ಯ; (ಶಿಲಾದಿತ್ಯ II). ಈತನು ಹುಟ್ಟಿದ್ದು ಕ್ರಿ.ಶ. ೫೯೦ರಲ್ಲಿ. ಪ್ರಭಾಕರವರ್ಧನ ಮತ್ತು ಯಶೋಮತಿ ಇವನ ತಂದೆತಾಯಿಗಳು. ಶ್ರೀಹರ್ಷನಿಗೆ ರಾಜ್ಯವರ್ಧನ ಎಂಬ ಅಣ್ಣನೂ, ರಾಜ್ಯಶ್ರೀ ಎಂಬ ತಂಗಿಯೂ ಇದ್ದರು. ಪ್ರಭಾಕರವರ್ಧನನು ಕಾಲವಾದ ಮೇಲೆ ರಾಜ್ಯವರ್ಧನನೇ ಅರಸಾಗಬೇಕಾಗಿತ್ತು. ಆದರೆ ಅಷ್ಟರಲ್ಲಿಯೇ ರಾಜ್ಯಶ್ರೀಯ ಗಂಡ ಮೌಖಾರಿಯರಸ ಗೃಹವರ್ಮನು ಮಾಲವರಾಜನಿಂದ ಹತನಾದನೆಂದೂ ರಾಜ್ಯಶ್ರೀಯು ಸೆರೆಸಿಕ್ಕಿದಳೆಂದೂ ಕೇಳಿ ರಾಜ್ಯವರ್ಧನನು ಸೇಡು ತೀರಿಸಿಕೊಳ್ಳಲು ಮಾಲವನ ಮೇಲೆ ದಂಡೆತ್ತಿ ಹೋದನು. ಮಾಲವನನ್ನು ಕೊಂದು ತಂಗಿಯನ್ನು ಕರೆದುಕೊಂಡು ಬರುವಾಗ, ಮಾಲವ ರಾಜನ ಸಹಾಯಕನಾಗಿದ್ದ ಗೌಡರಾಜ ಶಶಾಂಕನು ಮೋಸದಿಂದ ಈತನನ್ನು ಕೊಂದುಬಿಟ್ಟನು. ರಾಜ್ಯಶ್ರೀ ವಿಂಧ್ಯಾರಣ್ಯಕ್ಕೆ ಓಡಿ ಹೋದಳು. ಇದರಿಂದ ಹರ್ಷನೇ ಕ್ರಿ.ಶ. ೬೦೬ರಲ್ಲಿ ಪಟ್ಟಕ್ಕೆ ಬರಬೇಕಾಯಿತು. ರಾಜ್ಯಭಾರವನ್ನು ವಹಿಸಿಕೊಂಡ ಕೂಡಲೇ ದಂಡೆತ್ತಿ ಹೋಗಿ ಮಾಲವರಾಜ್ಯವನ್ನು ವಶಪಡಿಸಿಕೊಂಡು ರಾಜ್ಯಶ್ರೀಯನ್ನು ಪತ್ತೆಹಚ್ಚಿಸಿ ತನ್ನ ಬಳಿಯಲ್ಲೇ ಇಟ್ಟುಕೊಂಡನು. ಆರು ವರ್ಷಗಳ ಕಾಲ, ಒಂದೇ ಸಮನೆ, ದಿಗ್ವಿಜಯಕ್ಕಾಗಿ ಯುದ್ಧಮಾಡಿ ಉತ್ತರಭಾರತದಲ್ಲೆಲ್ಲಾ ಜಯಶೀಲನಾಗಿ 'ಉತ್ತರಾಪಥೇಶ್ವರ'ನಾದನು. ದಕ್ಷಿಣದೇಶವನ್ನೂ ಜಯಿಸಬೇಕೆಂಬ ಹಂಬಲದಿಂದ ಆಕಡೆ ದಂಡೆತ್ತಿ ಹೋಗಿ, ಸು. ಕ್ರಿ ಶ. ೬೨೦ ರಲ್ಲಿ ಆಗ ಕರ್ಣಾಟಕ ಚಕ್ರವರ್ತಿಯಾಗಿದ್ದ ಚಾಳುಕ್ಯರ ಇಮ್ಮಡಿಪುಲಿಕೇಶಿಯಿಂದ ಪರಾಜಿತನಾಗಿ ನರ್ಮದಾತೀರದಿಂದಲೇ ಹಿಂದಿರುಗಿಬಿಟ್ಟನು. ಇದೇ ಇವನ ಪ್ರಥಮ ಮತ್ತು ಅಂತಿಮ ಪರಾಜಯ. ಈ ಪರಾಜಯದಿಂದ ಶ್ರೀಹರ್ಷನಲ್ಲಿ ತುಂಬ ಪರಿವರ್ತನೆಯುಂಟಾಯಿತು. ಬೌದ್ಧ

ತತ್ವಗಳ ಕಡೆ ಅವನ ಮನಸ್ಸು ತಿರುಗಿತು. ಶ್ರೀಹರ್ಷನು ತನ್ನ ತಂಗಿಯೊಡನೆ ಬೌದ್ಧಮತಾವಲಂಬಿಯಾಗಲು ಸಮಯ ನಿರೀಕ್ಷಿಸುತ್ತಿದ್ದುದಾಗಿ ಬಾಣನು ಹರ್ಷಚರಿತೆಯಲ್ಲಿ ಹೇಳಿದ್ದಾನೆ. ಶ್ರೀಹರ್ಷನು [14] ಕೊನೆಕೊನೆಗೆ ಬೌದ್ಧಮತಕ್ಕೆ ಸೇರಿಯೇ ಬಿಟ್ಟುದಾಗಿ ಹ್ಯೂನತ್ಸಾಂಗನು ಬರೆದಿಟ್ಟಿದ್ದಾನೆ. ಶ್ರೀಹರ್ಷನ ಕಾಲದಲ್ಲಿ ಪ್ರಜೆಗಳು ಅನ್ಯಮತಸಹಿಷ್ಣುಗಳಾಗಿದ್ದುದಲ್ಲದೆ, ಒಂದು ಮತವನ್ನು ಬಿಟ್ಟು ಬೇರೊಂದು ಮತಕ್ಕೆ ಯಾವ ನಿರ್ಬಂಧವೂ ಇಲ್ಲದೆ ಸೇರಿಕೊಳ್ಳುತ್ತಿದ್ದರು- ಹಿಂದೂಧರ್ಮವೂ ಬೌದ್ಧಧರ್ಮವೂ ಪರಸ್ಪರ ಬೆರೆತು ಹೋಗಿತ್ತು.

ಸ್ವತಃ ಕವಿಯಾಗಿದ್ದುದಲ್ಲದೆ ಶ್ರೀಹರ್ಷನು ಅನೇಕ ಪ್ರಸಿದ್ಧ ಕವಿಗಳಿಗೂ ವಿದ್ವಾಂಸರಿಗೂ ಆಶ್ರಯದಾತೃವಾಗಿದ್ದನು. ಈತನ ಆಸ್ಥಾನಪಂಡಿತರಲ್ಲಿ ಬಾಣ, ಮಯೂರ, ಮತಂಗದಿವಾಕರ ಮುಂತಾದವರೂ ಚೀಣಾದೇಶದ ಹ್ಯೂನತ್ಸಾಂಗನೂ ಪ್ರಸಿದ್ಧರು. ಈತನ ಕಾಲದಲ್ಲೇ ನಲಂದ ವಿಶ್ವವಿದ್ಯಾಲಯವೂ, ದಿವಾಕರಮಿತ್ರನ ವಿದ್ಯಾಶ್ರಮವೂ, ಭಾರವಿ, ಭರ್ತೃಹರಿ ಮುಂತಾದ ಕವಿವರ್ಯರೂ ಇದ್ದದ್ದು. ಪ್ರತಿವರ್ಷವೂ ೨೧ ದಿವಸಗಳ ಕಾಲ ವಿದ್ವತ್ಸಭೆಯನ್ನು ಶ್ರೀಹರ್ಷನು ನಡೆಸಿ ಮತವಿಷಯಿಕವಾದ ಚರ್ಚೆ ನಡೆಸುತ್ತಿದ್ದನು.

**ಶ್ರೀಹರ್ಷನು ರಚಿಸಿರುವ ಗ್ರಂಥಗಳು** — ೧ ನಾಗಾನಂದನಾಟಕಮ್ ೨ ರತ್ನಾವಳೀ ನಾಟಿಕಾ ೩ ಪ್ರಿಯದರ್ಶಿಕಾನಾಟಿಕಾ ೪ ಸುಪ್ರಭಾತಸ್ತೋತ್ರ[15] ೫ ಅಷ್ಟಮಹಾಶ್ರೀಚೈತ್ಯಸಂಸ್ಕಾರಸ್ತೋತ್ರ ೬ ಒಂದು ನಿಘಂಟು[16] (ವ್ಯಾಕರಣ?) ಇವಲ್ಲದೆ ಎರಡು ತಾಮ್ರಶಾಸನಗಳೂ[17], ಸುಭಾಷಿತಗ್ರಂಥಗಳಲ್ಲಿ ಉದ್ಧೃತವಾಗಿರುವ ಕೆಲವು ಬಿಡಿಶ್ಲೋಕಗಳೂ[18] ಶ್ರೀಹರ್ಷರಚಿತವೆಂದು ಪ್ರಸಿದ್ಧವಾಗಿವೆ.

---

14 ಶ್ರೀಹರ್ಷನು ಕಾಲವಾದುದು ಕ್ರಿ. ಶ. ೬೪೮ ರಲ್ಲಿ.

15 ೪,೫ ಎರಡೂ ಬೌದ್ಧಮತಕ್ಕೆ ಸೇರಿದುವು. ಮೊದಲನೆಯದರಲ್ಲಿ ೨೪ ಶ್ಲೋಕಗಳೂ, ಎರಡನೆಯದರಲ್ಲಿ ೫ ಶ್ಲೋಕಗಳೂ ಇವೆ. 16 ಈ ಗ್ರಂಥ ಉಪಲಬ್ಧವಾಗಿಲ್ಲ.

17 ಎಪಿ. ಇಂ. iv೨೧೮; i೬೭. ಬನ್ಸ್ಖೇರಾ ಮತ್ತು ಮಧುಬನ ತಾಮ್ರಶಾಸನಗಳು.

ಕರ್ಮಣಾ ಮನಸಾ ವಾಚಾ ಕರ್ತವ್ಯಂ ಪ್ರಾಣಿಭಿರ್ಹಿತಂ ।

ಹರ್ಷೇಣೈತತ್ಸಮಾಖ್ಯಾತಂ ಧರ್ಮಾರ್ಜನಮನುತ್ತಮಮ್ ॥-(ಬನ್ಸ್ಖೇರಾಶಾಸನದಿಂದ)

18 ಅಶಕಮಲೋಲಮುಚಕ್ಷುಂ ತ್ಯಾಗಿನಮನುರಾಗಿಣಂ ವಿಶೇಷಜ್ಞಮ್ ।

ಯದಿ ನಾಶ್ರಯತಿ ಪರಂ ಶ್ರೀಃ ಶ್ರೀರೇವ ಹಿ ವಂಚಿತಾ ತತ್ರ ॥—ಸುಭಾಷಿತಾವಲೀ

## ೨ ರತ್ನಾವಳೀ ನಾಟಿಕೆ

ರತ್ನಾವಳೀ ನಾಟಿಕೆಯು ಶ್ರೀಹರ್ಷನ ಕೃತಿಗಳಲ್ಲಿ ಅತ್ಯುತ್ತಮವಾದುದೆಂದು ಸಮಾಲೋಚಕರಿಂದ ಹೆಸರು ಪಡೆದಿದೆ. ಸಿಂಹಳರಾಜಪುತ್ರಿ ರತ್ನಾವಳಿಯನ್ನು ಕೌಶಾಂಬಿಯರಾಜ ಉದಯನನು ಮದುವೆಯಾದ ರಮ್ಯವಾದ ಕಥೆಯೇ ಈ ನಾಟಿಕೆಯ ವಸ್ತು.

### ಕಥಾವಸ್ತು

**ಪ್ರಸ್ತಾವನೆ**-- ಸಾಂಪ್ರದಾಯಿಕ ರೀತಿಯ (ನಾಲ್ಕು) ಐದು ನಾಂದೀ ಶ್ಲೋಕಗಳಾದ ಮೇಲೆ, ಸೂತ್ರಧಾರನು ರಂಗಭೂಮಿಯ ಮೇಲೆ ಬಂದು, ಶ್ರೀಹರ್ಷದೇವನಿಂದ ಹೊಸದಾಗಿ ರಚಿತವಾದ ರತ್ನಾವಳೀ ನಾಟಿಕೆಯನ್ನು, ವಸಂತೋತ್ಸವದ ಅಂಗವಾಗಿ, ತನಗೆ ಸಭಿಕರಿಂದಾದ ಆಜ್ಞೆಯನ್ನು ಅನುಸರಿಸಿ ಅಭಿನಯಿಸುವುದಾಗಿ ಹೇಳಿ ನಟಿಯನ್ನು ಕರೆದು ನಾಟಕಾಭಿನಯಕ್ಕೆ ಸಿದ್ಧಳಾಗಬೇಕೆಂದು ಸೂಚಿಸುತ್ತಾನೆ. ಆದರೆ ನಟಿಯು ತನ್ನ ಪ್ರಾಪ್ತವಯಸ್ಕಳಾದ ಮಗಳಿಗೆ ದೇಶಾಂತರದ ವರನು ನಿಶ್ಚಿತನಾಗಿರುವುದರಿಂದ ಆ ವಿವಾಹವು ಹೇಗೆ ತಾನೇ ಆದೀತೋ ಎಂದು ಚಿಂತಾಗ್ರಸ್ತಳಾಗಿ, 'ಮನಸ್ಸಿಗೆ ನಿರಾಳವಿಲ್ಲದೆ ರಂಗಭೂಮಿಯ ಮೇಲೆ ನರ್ತಿಸುವುದು ಹೇಗೆ ತಾನೇ ಸಾಧ್ಯ?' ಎನ್ನುತ್ತಾಳೆ. ಅದಕ್ಕೆ ಸೂತ್ರಧಾರನು 'ವಿಧಿ ಅನುಕೂಲವಾಗಿದ್ದರೆ ಸಮುದ್ರಮಧ್ಯದಿಂದಾಗಲೀ, ದ್ವೀಪಾಂತರದಿಂದಾಗಲೀ, ದಿಗಂತದಿಂದಾಗಲೀ, ಅಪೇಕ್ಷಿತವಾಗಿ ಕರೆತಂದು, (ನಮಗೆ) ಅಭಿಮತ ಸಂಘಟನೆಯಾಗುವಂತೆ ಮಾಡುತ್ತದೆ. ಯೋಚಿಸಬೇಡ.' ಎಂದು ಹೇಳಿ ತನ್ಮೂಲಕ ಸಭಿಕರಿಗೆ ನಾಟಕೆಯ ಕಥಾವಸ್ತುವನ್ನು ಸೂಚಿಸುತ್ತಾನೆ.

**ಅಂಕ ೧** — ಸೂತ್ರಧಾರನಾಡಿದ ಮಾತುಗಳನ್ನೇ ಹೇಳಿಕೊಂಡು ತೆರೆಯ ಹಿಂದಿನಿಂದ ಯೌಗಂಧರಾಯಣನು ರಂಗಭೂಮಿಯ ಮೇಲೆ ಬಂದು ತಾನು ಅಲ್ಲಿಯವರೆಗೆ ನಡೆಯಿಸಿರುವ ಕೆಲಸಗಳನ್ನು ಸಂಗ್ರಹವಾಗಿ ವಿಮರ್ಶಿಸುತ್ತಾ ನಾಟಕದ ಕಥಾವಸ್ತುವಿನ ಹಿನ್ನೆಲೆಯನ್ನು ಸಭಿಕರಿಗೆ ಸೂಚಿಸುತ್ತಾನೆ.

[**ಹಿನ್ನೆಲೆ**—ಸಿಂಹಳದ ರಾಜನಾದ ವಿಕ್ರಮಬಾಹುವಿಗೆ ತುಂಬಾ ಸುಂದರಿಯಾಗಿದ್ದ ರತ್ನಾವಳೀ ಎಂಬ ಮಗಳಿದ್ದಳು. ಆಕೆಯನ್ನು ಮದುವೆಯಾಗುವವನು ಸಾರ್ವಭೌಮನಾಗುವನೆಂಬ ಸಿದ್ಧಾದೇಶದಲ್ಲಿ ನಂಬಿಕೆಯಿಟ್ಟು, ಕೌಶಾಂಬಿಯ ಅರಸನಾದ ಉದಯನನ ಮಂತ್ರಿ ಯೌಗಂಧರಾಯಣನು ತನ್ನ ಸ್ವಾಮಿಗೆ ರತ್ನಾವಳಿಯನ್ನು ಮದುವೆಮಾಡಿಕೊಡಬೇಕೆಂದು ಸಿಂಹಳರಾಜನನ್ನು ಪ್ರಾರ್ಥಿಸಿದನು. ಉದಯನನಿಗೆ ಈಗಾಗಲೇ ಮದುವೆಯಾಗಿತ್ತು. ಆತನ ಹೆಂಡತಿ

ವಾಸವದತ್ತೆ ವಿಕ್ರಮಬಾಹುವಿನ ತಂಗಿಯ ಮಗಳು. ಆದ್ದರಿಂದ ಅವನು ವಾಸವದತ್ತೆಯ ಮನಸ್ಸಿಗೆ ಖೇದವುಂಟುಮಾಡಲು ಇಷ್ಟವಿಲ್ಲದೆ ಈ ಸಂಬಂಧಕ್ಕೆ ಒಪ್ಪಲಿಲ್ಲ. ಯೌಗಂಧರಾಯಣನು ಮಾತ್ರ ತನ್ನ ಸ್ವಾಮಿಯ ಅಭ್ಯುದಯಕ್ಕಾಗಿ ಹೇಗಾದರೂ ಈ ವಿವಾಹವನ್ನು ಸಾಧಿಸಲೇ ಬೇಕೆಂದು ತೀರ್ಮಾನಿಸಿಕೊಂಡು, ವಾಸವದತ್ತೆಯನ್ನು ತನ್ನ ಪತಿಯಿಂದ ಸ್ವಲ್ಪಕಾಲ ವಿರಹಿತಳಾಗಿರುವುದಕ್ಕೆ ಒಪ್ಪಿಸಿ, ಅವಳನ್ನು ಏಕಾಂತದಲ್ಲಿಟ್ಟು, ಮಹಾರಾಣಿಯು ಲಾವಾಣಕದಲ್ಲಿ ಉಂಟಾದ ಬೆಂಕಿಯ ಆಕಸ್ಮಿಕದಲ್ಲಿ ಸುಟ್ಟು ಹೋದಳೆಂದು ಪ್ರವಾದವನ್ನು ಹರಡಿಬಿಟ್ಟನು. ಈ ಸುದ್ದಿಯು ಕ್ರಮೇಣ ಸಿಂಹಳಕ್ಕೂ ಮುಟ್ಟಿದಮೇಲೆ, ಯೌಗಂಧರಾಯಣನು ವಿವಾಹ ವಿಚಾರವನ್ನು ಪುನಃ ಪ್ರಸ್ತಾಪಿಸಲು ತನ್ನ ಕಡೆಯ ಕಂಚುಕಿ ಬಾಭ್ರವ್ಯನನ್ನು ಸಿಂಹಳಕ್ಕೆ ಕಳುಹಿಸಿದನು. ವಾಸವದತ್ತೆಯು ಲಾವಾಣಕದಲ್ಲಿ ಸುಟ್ಟು ಹೋದಳೆಂದು ಕೇಳಿದ್ದ ಸಿಂಹಳೇಶ್ವರನು, ವಿವಾಹಕ್ಕೆ ಈಗ ಆತಂಕವೇನೂ ಇಲ್ಲದಿದ್ದುದರಿಂದ ತನ್ನ ಮಗಳಾದ ರತ್ನಾವಳಿಯನ್ನು ಉದಯನನಿಗೆ ಕೊಡಲು ಸಮ್ಮತಿಸಿ, ತನ್ನ ಅಮಾತ್ಯ ವಸುಭೂತಿಯ ಜತೆಯಲ್ಲಿ ಆಕೆಯನ್ನು ಕೌಶಾಂಬಿಗೆ ಬಾಭ್ರವ್ಯನೊಡನೆ ಕಳುಹಿಸಿಕೊಟ್ಟನು. ಆದರೆ ದುರ್ದೈವದಿಂದ ಸಮುದ್ರದ ಮಧ್ಯೆ ಹಡಗು ಒಡೆದು ಹೋಯಿತು. ರತ್ನಾವಳಿಯು ಕೈಗೆ ಸಿಕ್ಕಿದ ಹಲಗೆಯೊಂದನ್ನು ಹಿಡಿದುಕೊಂಡು ತೇಲುತ್ತಿರುವಾಗ ಅದೇ ಮಾರ್ಗವಾಗಿ ಹಡಗಿನಲ್ಲಿ ಬರುತ್ತಿದ್ದ ಕೌಶಾಂಬಿಯ ವ್ಯಾಪಾರಿಯೊಬ್ಬನಿಗೆ ಅವಳು ಕಾಣಿಸಲಾಗಿ ಅವನು ಅವಳನ್ನು ಹಡಕ್ಕೆ ಕರೆತಂದುದಲ್ಲದೆ, ಅವಳ ಕುತ್ತಿಗೆಯಲ್ಲಿದ್ದ ರತ್ನಮಾಲೆಯಿಂದ ಆಕೆಯನ್ನು ಗುರ್ತಿಸಿ ಯೌಗಂಧರಾಯಣನಿಗೆ ಒಪ್ಪಿಸಿದನು. ಯೌಗಂಧರಾಯಣನೂ ಅವಳು ಯಾರೆಂಬ ನಿಜಾಂಶವನ್ನು ಯಾರಿಗೂ ತಿಳಿಸದೆ, 'ಸಾಗರಿಕೆ ಇವಳು — ಸಾಗರದಿಂದ ದೊರೆತವಳು' ಎಂದು ಮಾತ್ರ ಹೇಳಿ, ಅವಳನ್ನು ವಾಸವದತ್ತೆಯ ರಕ್ಷಣೆಯಲ್ಲಿಟ್ಟುಬಿಟ್ಟನು. ಮಹಾರಾಣಿಯೂ ಅವಳನ್ನು ತನ್ನ ಪರಿಚಾರಿಣಿಯಾಗಿ ನೇಮಿಸಿ ಕೊಂಡಳು. ಕಂಚುಕಿ ಬಾಭ್ರವ್ಯನೂ, ಸಿಂಹಳದ ಅಮಾತ್ಯ ವಸುಭೂತಿಯೂ ಸಹ ಹೇಗೋ ಸಮುದ್ರದಿಂದ ಪಾರಾಗಿ, ಕೋಸಲದ ಅರಸನ ಮೇಲೆ ಯುದ್ಧಮಾಡುತ್ತಿದ್ದ ರುಮಣ್ವಂತನನ್ನು ಸೇರಿಕೊಂಡರು.]

ಯೌಗಂಧರಾಯಣನು ತನ್ನ ಏಕಪಾತ್ರ ಭಾಷಣದಲ್ಲಿ ಈ ಹಿನ್ನೆಲೆಯ ಕಥೆಯನ್ನು ಸೂಚಿಸಿ, ತನ್ನ ಸ್ವಾಮಿಯ ಅಭ್ಯುದಯಕ್ಕಾಗಿ ತಾನು ಮಾಡುತ್ತಿರುವ ಹಂಚಿಕೆಗಳಲ್ಲಿ ವಿಧಿಯು ನೀಡುತ್ತಿರುವ ಸಾಹಾಯ್ಯವನ್ನು ವಿವರಿಸಿ,

ಮದನಮಹೋತ್ಸವದಲ್ಲಿ ಜನರೆಲ್ಲರೂ ಆನಂದಮಗ್ನರಾಗಿರುವುದಕ್ಕೆ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತಾನೆ. (ವಿಷ್ಕಂಭಕ)

ಈ ರೀತಿ ವಿಷ್ಕಂಭಕವಾದಮೇಲೆ, ವತ್ಸರಾಜ (ಉದಯನ)ನೂ, ಅವನ ಗೆಳೆಯ ವಿದೂಷಕನೂ, ಎಲ್ಲೆಲ್ಲೂ ನಡೆಯುತ್ತಿರುವ ಮದನ ಮಹೋತ್ಸವ ವನ್ನು ವರ್ಣಿಸುತ್ತಾರೆ. ಇಬ್ಬರು ಚೇಟಿಯರು ನರ್ತಿಸುತ್ತಾ ಬರುತ್ತಾರೆ. ರಾಜನು ಅವರ ನೃತ್ಯಭಂಗಿಗೆ ಬೆರಗಾಗುತ್ತಾನೆ. ವಿದೂಷಕನು ಅವರೊಡನೆ ತಾನೂ ಕುಣಿಯುವುದಾಗಿ ಹೇಳಿ ಹೋಗಿ, ಬೆಪ್ಪು ಬೆಪ್ಪಾಗಿ ಮಾತಾಡಿ, ಚೇಟಿ ಯರ ಹಾಸ್ಯಕ್ಕೆ ಪಾತ್ರನಾಗುತ್ತಾನೆ. ಈ ವಿನೋದದ ಬಳಿಕ ಆ ಚೇಟಿ ಯರು ರಾಜನ ಹತ್ತಿರ ಬಂದು, ಮಹಾರಾಣಿಯು ಮಕರಂದೋದ್ಯಾನದಲ್ಲಿ ರಕ್ತಾಶೋಕ ವೃಕ್ಷದ ತಳದಲ್ಲಿ ಮನ್ಮಥನ ಪೂಜೆ ಮಾಡುವುದಾಗಿರುವುದರಿಂದ ಅಲ್ಲಿಗೆ ಮಹಾರಾಜರು ಬರಬೇಕೆಂದು ಮಹಾರಾಣಿಯು ಬಿನ್ನೈಸುತ್ತಾಳೆಂದು ತಿಳಿಸುತ್ತಾರೆ. ಅದನ್ನು ಕೇಳಿ ವಿದೂಷಕನ ಜತೆಯಲ್ಲಿ ರಾಜನು ಉದ್ಯಾನದ ಕಡೆ ತೆರಳುತ್ತಾನೆ. ಇಷ್ಟರಲ್ಲೇ ಮಹಾರಾಣಿಯೂ ಪರಿವಾರ ಸಮೇತಳಾಗಿ ಅಶೋಕ ವೃಕ್ಷದ ಸಮೀಪಕ್ಕೆ ಬಂದು, ತನ್ನ ಪರಿವಾರದಲ್ಲಿ ಸಾಗರಿಕೆಯೂ ಇರುವುದನ್ನು ಗಮನಿಸಿ ವ್ಯಗ್ರಳಾಗುತ್ತಾಳೆ. ನವಯೌವನದಲ್ಲಿದ್ದ ಅವಳ ಪರಿಪೂರ್ಣ ಸೌಂದರ್ಯಕ್ಕೆ ತನ್ನ ಗಂಡನು ಮನಸೋಲುವನೆಂಬ ಭಾವನೆಯಿಂದ ಆಕೆಯು ಆವನಿಗೆ ಗೋಚರವಾಗದಂತೆ ಪ್ರಯತ್ನ- ಪುರಸ್ಸರವಾಗಿ ಅವಳನ್ನು ಗೋಪ್ಯವಾಗಿಯೇ ಇಟ್ಟಿದ್ದಳು. ಇಂದು ಮಹಾರಾಜನೂ ಅಲ್ಲಿಗೆ ಬರುವವ ನಾಗಿದ್ದುದರಿಂದ ಆಕೆಯು ಅಲ್ಲಿರುವುದನ್ನು ಸೈರಿಸಲಾರದೆ, ಏನೋ ನೆಪಹೇಳಿ ಅವಳನ್ನು ಅರಮನೆಗೇ ಕಳುಹಿಸಿ ಬಿಡುತ್ತಾಳೆ. ಸಾಗರಿಕೆಯಾದರೋ ಕಾಮದೇವನ ಪೂಜೆ ನಡೆಯುವ ರೀತಿಯನ್ನು ನೋಡಬೇಕೆಂಬ ಕುತೂಹಲ ದಿಂದ ಅಲ್ಲೇ ಸ್ವಲ್ಪದೂರದಲ್ಲಿ ಮರೆಯಾಗಿರುವುದಲ್ಲದೆ ತಾನೂ ನಿಂತಲ್ಲಿಂದಲೇ ಕಾಮದೇವನ ಪೂಜೆ ನಡೆಯಿಸುವ ಉದ್ದೇಶದಿಂದ ಹೂಗಳನ್ನು ಕುಯ್ಯುತ್ತಾಳೆ. ಈ ಮಧ್ಯೆ ರಾಣಿಯು ಕಾಮನ ಪೂಜೆ ಮುಗಿಸಿ ಮಹಾರಾಜನಿಗೆ ಪೂಜೆ ಸಲ್ಲಿ ಸುತ್ತಾಳೆ. ಸಾಗರಿಕೆ ಹೂ ಕುಯ್ಯುತ್ತಿದ್ದುದರಿಂದ ಮೊದಲನೆಯ ಪೂಜೆಯನ್ನು ಗಮನಿಸಿರಲಿಲ್ಲ. ರಾಜನಿಗೆ ಪೂಜೆಯಾಗುವಾಗ ಅದನ್ನು ನೋಡಿ, ಅವನೇ ಕಾಮ ನೆಂದು ಭ್ರಮಿಸಿ, ಇದೇನು ಇಲ್ಲಿ ಕಾಮ ಪ್ರತ್ಯಕ್ಷನಾಗಿಯೇ ಬಂದು ಪೂಜೆ ಸ್ವೀಕರಿಸುತ್ತಾನಲ್ಲಾ ! ಎಂದು ಆಶ್ಚರ್ಯ ಮಗ್ನಳಾಗುತ್ತಾಳೆ. ಪಾಪ! ರಾಜ

ನನ್ನು ಆಕೆ ಆವರೆಗೆ ನೋಡಿದ್ದಿಲ್ಲ. ಸಿಕ್ಕಿರುವ ಅವಕಾಶ ಕಳೆದುಕೊಳ್ಳ ಬಾರದೆಂದು ತಾನೂ ನಿಂತಿದ್ದ ಕಡೆಯಿಂದಲೇ, ಅದೇ ಕಾಮ (ರಾಜ) ನಿಗೆ ತನ್ನ ಪೂಜೆಯನ್ನು ಹೂಗಳಿಂದ ಸಲ್ಲಿಸುತ್ತಾಳೆ. ಅಷ್ಟರಲ್ಲೇ ಸಾಯಂಕಾಲವಾದು ದರಿಂದ ವಂದಿಗಳು ಹಾಡುತ್ತಾರೆ. ಅದರಿಂದ ತಮ್ಮಿಂದ ಪೂಜಿತನಾದವನು ಕಾಮನಲ್ಲ, 'ವತ್ಸರಾಜ ಉದಯನ'ನೆಂಬುದು ಸಾಗರಿಕೆಗೆ ತಿಳಿಯುತ್ತೆ. ಆತನಿಗೇ ಅವಳ ತಂದೆ ಅವಳನ್ನು ಮದುವೆ ಮಾಡಿಕೊಡುವುದಾಗಿ ಮಾತು ಕೊಟ್ಟಿದ್ದುದು. ಇದರಿಂದ ಅವಳಿಗೆ ಅವನಲ್ಲಿ ಪ್ರೇಮ ಅಂಕುರಿಸುತ್ತದೆ. ಇಷ್ಟ ರಲ್ಲೇ ರಾಜ-ರಾಣಿ-ಪರಿವಾರದವರೆಲ್ಲಾ ಅರಮನೆಗೆ ಹಿಂದಿರುಗುತ್ತಾರೆ.

( ಇಲ್ಲಿಗೆ ಮದನಮಹೋತ್ಸವವೆಂಬ ಮೊದಲನೆಯ ಅಂಕ )

**ಅಂಕ ೨** — ಗಿಡಗಳು ಅಕಾಲದಲ್ಲೂ ಕುಸುಮಿತವಾಗುವ ದೋಹದವನ್ನು ಶ್ರೀಕಂಠದಾಸಧಾರ್ಮಿಕನೆಂಬುವನಿಂದ ರಾಜನು ಕಲಿತು, ಅದನ್ನು ತನ್ನ ನೆಚ್ಚಿನ ನವಮಾಲಿಕೆಯ ಮೇಲೆ ಪ್ರಯೋಗಿಸುವನೆಂಬುದನ್ನೂ ಮತ್ತು ಸಾಗರಿಕೆಯು ಬಣ್ಣದಕುಡಿಕೆ ಕುಂಚಗಳೊಡನೆ ಕದಳೀಗೃಹಕ್ಕೆ ಹೋದವಳೆಂಬುದನ್ನೂ ಇಬ್ಬರು ಚೇಟಿಯರು ತಮ್ಮ ಸಂಭಾಷಣೆಯ ಮೂಲಕ ಸೂಚಿಸುತ್ತಾರೆ. (ಪ್ರವೇಶಕ)

(ದೃಶ್ಯ—ಕದಳೀ ಗೃಹ) ಮದನಾವಸ್ಥೆಯಲ್ಲಿರುವ ಸಾಗರಿಕೆ ಕದಳೀಗೃಹ ದಲ್ಲಿ ತನ್ನ ಪ್ರಿಯನ ಚಿತ್ರಬರೆಯುತ್ತಿದ್ದಾಳೆ. ಆಗ ಅವಳಿಗೆ ತಿಳಿಯದಂತೆ ಹಿಂಬದಿಯಿಂದ ಅವಳ ಸಖಿ ಸುಸಂಗತೆ ಪ್ರವೇಶಿಸಿ ಮಹಾರಾಜನೇ ಚಿತ್ರಿತ ನಾಗಿರುವುದನ್ನು ಕಂಡು 'ಕಮಲಾಕರವಾದ ಸರೋವರದಲ್ಲಲ್ಲದೆ ಬೇರೆಲ್ಲಿ ರಾಜ ಹಂಸಿಯು ನಲಿದಾಡುವುದು?' ಎಂದು ಸಂತೋಷಿಸುತ್ತಾಳೆ. ಮುಂದೆ ಅವರಿಬ್ಬ ರಲ್ಲೂ ನಡೆಯುವ ಸಂಭಾಷಣೆ ಸ್ವಾರಸ್ಯವಾಗಿದೆ.

**ಸುಸಂಗತೆ** —ಸಖಿ, ನಿನ್ನಿಂದ ಚಿತ್ರಿತನಾಗಿರುವ ಈತ ಯಾರು?

**ಸಾಗರಿಕೆ**—ಈ ಮದನಮಹೋತ್ಸವದಲ್ಲಿನ ಮನ್ಮಥದೇವ.

**ಸುಸಂಗತೆ** —(ನಗುತ್ತಾ) ಎಷ್ಟು ನಿಪುಣತೆಯೇ ನಿನ್ನದು! ಆದರೆ ಚಿತ್ರ ಏನೋ ಶೂನ್ಯವಾಗಿರುವಂತಿದೆ. ನಾನು ಪೂರ್ಣಮಾಡುತ್ತೇನೆ. (ಎಂದು ಮನ್ಮಥನ ಪಕ್ಕದಲ್ಲಿ ರತಿಯನ್ನು ಬರೆಯುವ ವ್ಯಾಜದಿಂದ ಸಾಗರಿಕೆಯನ್ನು ಚಿತ್ರಿಸುತ್ತಾಳೆ)

**ಸಾಗರಿಕೆ**— (ನೋಡಿ) ಸುಸಂಗತೆ, ನನ್ನನ್ನೇಕೆ ಇಲ್ಲಿ ಚಿತ್ರಿಸಿದೆ?

**ಸುಸಂಗತೆ**—(ನಗುತ್ತಾ) ನಿನ್ನಿಂದ ಯಾವ ಬಗೆಯ ಕಾಮದೇವನು ಚಿತ್ರಿತ ನಾಗಿದ್ದಾನೋ, ಅದೇ ಬಗೆಯ ರತಿ ನನ್ನಿಂದ ಚಿತ್ರಿತಳಾಗಿದ್ದಾಳೆ. ಅದಿರಲಿ, ಮರೆಮಾಚದೆ ಎಲ್ಲಾ ವೃತ್ತಾಂತವನ್ನೂ ಹೇಳಿಬಿಡು.

ಸಾಗರಿಕೆ ತನ್ನ ಪ್ರಣಯವೃತ್ತಾಂತವನ್ನು ಸುಸಂಗತೆಗೆ ತಿಳಿಸುತ್ತಾಳೆ. 'ನಿನ್ನಂತಹ ಕನ್ಯಾರತ್ನ ಅವಶ್ಯವಾಗಿಯೂ ಇಂತಹ ವರನಲ್ಲೇ ಅಭಿಲಾಷೆ ಉಳ್ಳವಳಾಗಿರಬೇಕು' ಎಂದು ಹೇಳಿ ಸುಸಂಗತೆ ಆಕೆಯನ್ನು ಹುರಿದುಂಬಿಸುತ್ತಾಳೆ. ಆದರೆ ಅವರ ಬಳಿಯೇ ಇದ್ದ ಸಾರಿಕೆ ಇವರ ಈ ಸಂಭಾಷಣೆಯನ್ನು ಬೇರಾರ ಮುಂದಾದರೂ ಹೇಳಿಬಿಡುವುದೋ ಎಂಬ ಶಂಕೆ ಸಖಿಯರಿಬ್ಬರನ್ನೂ ಬಾಧಿಸುತ್ತದೆ. ಸಾಗರಿಕೆಯ ಮದನತಾಪಪರಿಹಾರಕ್ಕಾಗಿ, ಸುಸಂಗತೆ ತಾವರೆದಳಗಳ ಹಾಸುಗೆ ರಚಿಸಿ ಅದರ ಮೇಲೆ ಅವಳನ್ನು ಮಲಗಿಸಿ ಎದೆಗೆ ಮೃಣಾಲಗಳನ್ನೂ ತಾವರೆದಳಗಳನ್ನೂ ಅಪ್ಪುತ್ತಾಳೆ. ಆದರೂ ಸಾಗರಿಕೆ ತಾಪವನ್ನು ಸಹಿಸಲಾರದೆ–

'ನನ್ನ ಪ್ರೀತಿಯೆಲ್ಲಾ (ನನಗೆ) ದುರ್ಲಭನಾದವನಿಗಾಗಿದೆ. ನಾಚಿಕೆ ಬೇರೆ ಬಾಧಿಸುತ್ತಿದೆ. ನಾಲಮದಕ್ಕೆ ನಾನೇ ಪರಾಧೀನೆ. ಸಖಿ, ಪ್ರೇಮ ತುಂಬಾ ಪಡಸಾದ್ದು. ಮರಣವೊಂದೇ ನನಗೆ ಗತಿ' ಎಂದು ಹೇಳುತ್ತಾ ಮೂರ್ಛಿತಳಾಗುತ್ತಾಳೆ.

ಸಾಗರಿಕೆಗೆ ಪುನಃ ಪ್ರಜ್ಞೆ ಬರುವ ವೇಳೆಗೆ ಮೃಗಶಾಲೆಯಿಂದ ತಪ್ಪಿಸಿಕೊಂಡು ಬಂದಿರುವ ಒಂದು ಕಾಡುಕೋತಿಯು ಅರಮನೆಯೊಳಕ್ಕೆ ನುಗ್ಗಿ ಅಲ್ಲಿನ ಹೆಂಗಸರನ್ನೆಲ್ಲಾ ಹೆದರಿಸಿ ಕದಳೀಗೃಹದ ಕಡೆ ಹೊರಡುತ್ತದೆ.

ಇದನ್ನು ಕಂಡು ಸಖಿಯರಿಬ್ಬರೂ ಗಾಬರಿಯಲ್ಲಿ ಚಿತ್ರಫಲಕವನ್ನೂ ಸಾರಿಕೆಯ ಪಂಜರವನ್ನೂ ಅಲ್ಲೇ ಬಿಟ್ಟು ಬಿಟ್ಟು, ಸಮೀಪದಲ್ಲೇ ಇದ್ದ ತಮಾಲವೃಕ್ಷಗಳ ಕತ್ತಲೆಯ ಪ್ರದೇಶಕ್ಕೆ ಹೋಗಿ ಅವಿತುಕೊಳ್ಳುತ್ತಾರೆ. ಕೋತಿಯು ಕದಳೀಗೃಹಕ್ಕೆ ಹೋಗಿ ಪಂಜರದ ಬಾಗಿಲನ್ನು ತೆರೆದು ಹಾಕಿಬಿಡುತ್ತದೆ. ಸಾರಿಕೆಯೂ ಹೊರಕ್ಕೆ ಹಾರಿಬರುತ್ತದೆ. ಇದನ್ನು ಕಂಡ ಸಖಿಯರು ಸಾರಿಕೆಯನ್ನು ಹಿಡಿಯಲು ಅದರ ಹಿಂದೆ ಹಿಂದೆ ಹೋಗುತ್ತಾರೆ.

ಇಷ್ಟರಲ್ಲಿ ವಿದೂಷಕನೂ ರಾಜನೂ ಹೊಸದೋಹದದಿಂದ ಕುಸುಮಿತವಾಗಿರುವ ನವಮಾಲಿಕೆಯನ್ನು ನೋಡಲು ಮಕರಂದೋದ್ಯಾನದೊಳಕ್ಕೆ ಬರುತ್ತಾರೆ. ದಾರಿಯಲ್ಲಿ ಬಕುಳವೃಕ್ಷವೊಂದರ ಮೇಲೆ ಕುಳಿತು ಸಾರಿಕೆ ಮಾತಾಡುತ್ತದೆ. ಅದನ್ನು ಕೇಳಿ ವಿದೂಷಕನು ಇಲ್ಲಿ ಭೂತವಿದೆಯೆಂದು ಹೆದರುತ್ತಾನೆ. ರಾಜನು ಗಮನಿಸಿ ಕೇಳಿ ಅದು ಸಾರಿಕೆಯಾಡುವ ಮಾತೆಂಬುದನ್ನು ಮನಗಂಡು ಅವಧಾನದಿಂದ ಕೇಳುತ್ತಾನೆ. ಸಾಗರಿಕೆ ಮತ್ತು ಸುಸಂಗತೆಯರ ನಡುವೆ ಕದಳೀಗೃಹದಲ್ಲಿ ನಡೆದ ಸಂಭಾಷಣೆಯನ್ನು ಅದು ಸ್ವಲ್ಪ ಸ್ವಲ್ಪವಾಗಿ ಉಚ್ಚರಿಸುತ್ತದೆ. ಇದನ್ನು ಕೇಳಿದ ರಾಜನು ವಿದೂಷಕನೊಡನೆ ಅದರ ವಿಮರ್ಶೆಮಾಡುತ್ತಿರುವಾಗ ವಿದೂಷಕನು ಕೈಚಪ್ಪಾಳೆ ತಟ್ಟಿ ಗಟ್ಟಿಯಾಗಿ ನಗುತ್ತಾನೆ. ಇದರಿಂದ

ಸಾರಿಕೆ ಹೆದರಿ ಕದಳೀಗೃಹದಕಡೆ ಹಾರಿ ಹೋಗುತ್ತದೆ. ಅದನ್ನು ಕಂಡು ಇಬ್ಬರೂ ಆ ಕದಳೀಗೃಹಕ್ಕೇ ಹೋಗುತ್ತಾರೆ. ಅಲ್ಲಿ ಸಾರಿಕೆಯ ಖಾಲೀ ಪಂಜರವೂ, ಸಾಗರಿಕೆ ರಾಜ ಚಿತ್ರಿತರಾಗಿರುವ ಚಿತ್ರಫಲಕವೂ ಅವರ ಕಣ್ಣಿಗೆ ಬೀಳುತ್ತವೆ. ರಾಜನು ಚಿತ್ರದಲ್ಲಿನ ಸಾಗರಿಕೆಯ ಸೌಂದರ್ಯವನ್ನು ನೋಡಿ ಬೆರಗುಗೊಂಡು ಆಕೆಯೇ ಸಾರಿಕೆಯಾಡಿದ ಕನ್ಯೆಯೆಂದು ತೀರ್ಮಾನಿಸಿ ಅವಳಲ್ಲಿ ಮೋಹಗೊಳ್ಳುತ್ತಾನೆ. ಅವಳ ಚಿತ್ರದ ಪಕ್ಕದಲ್ಲೇ ತನ್ನನ್ನೂ ಚಿತ್ರಿಸಿರುವುದರಿಂದ, ಅವಳೂ ತನ್ನಲ್ಲೇ ಮೋಹಗೊಂಡಿದ್ದಾಳೆಂಬುದನ್ನು ಮನಗಂಡು ಹಿಗ್ಗುತ್ತಾನೆ.

ಈ ವೇಳೆಗೆ ಸಾರಿಕೆಯನ್ನು ಹಿಡಿಯುವುದರಲ್ಲಿ ವಿಫಲರಾಗಿ ಸಾಗರಿಕೆ ಸುಸಂಗತೆಯರು ಚಿತ್ರಫಲಕವನ್ನಾದರೂ ತೆಗೆದುಕೊಳ್ಳೋಣವೆಂದು ಕದಳೀಗೃಹಕ್ಕೆ ಬರುತ್ತಾರೆ. ಆದರೆ ರಾಜನೂ ವಿದೂಷಕನೂ ಅಲ್ಲಿರುವುದನ್ನು ಕಂಡು ಮರೆಯಾಗಿ ನಿಂತು ಅವರಾಡುವ ಮಾತುಗಳನ್ನು ಹೊಂಚುಕೇಳುತ್ತಾರೆ. ರಾಜನು ಸಾಗರಿಕೆಗಾಗಿ ತನ್ನ ಮನಸ್ಸು ಹಂಬಲಿಸುತ್ತಿರುವುದನ್ನು ವಿದೂಷಕನಿಗೆ ಬಿಚ್ಚಿ ಹೇಳಿದುದನ್ನು ಕೇಳಿ, ಸುಸಂಗತೆಯು, ಅದೇ ಸುಸಮಯವೆಂದು ನಿಶ್ಚಯಿಸಿ, ಸಾಗರಿಕೆಗೆ ಚಿತ್ರಫಲಕ ತರುವುದಕ್ಕೆ ಹೋಗುತ್ತೇನೆಂದು ನೆಪ ಹೇಳಿ, ರಾಜನ ಮುಂದೆ ಅನಿರೀಕ್ಷಿತವಾಗಿ ಬಂದು ನಿಲ್ಲುತ್ತಾಳೆ. ವಿದೂಷಕನು ಗಾಬರಿಗೊಂಡು ಬಾಳೆಯುಲೆಯಿಂದ ಚಿತ್ರಫಲಕವನ್ನು ಮುಚ್ಚುತ್ತಾನೆ. ಸುಸಂಗತೆಯಾದರೋ ತನಗೆಲ್ಲಾ ಗೊತ್ತಿರುವುದಾಗಿಯೂ ಮಹಾರಾಣಿಗೆ ಹೇಳುವುದಾಗಿಯೂ ಹೆದರಿಸುತ್ತಾಳೆ. ರಾಜನು ಸಮಾಧಾನ ಹೇಳಿ ತನ್ನ ಕಿವಿಯ ಆಭರಣವನ್ನು ಅವಳಿಗೆ ಪಾರಿತೋಷಿಕವೆಂದು ಕೊಡಹೋಗುತ್ತಾನೆ. ಆದರೆ ಸುಸಂಗತೆ ಅದನ್ನು ತೆಗೆದುಕೊಳ್ಳದೆ, ತನ್ನ ಸಖಿ ಕೋಪಗೊಂಡಿದ್ದಾಳೆಂದೂ, ಅವಳನ್ನು ಮಹಾರಾಜನೇ ಬಂದು ಸಮಾಧಾನಪಡಿಸಿದರೆ ಅದೇ ತನಗೆ ವಿಶೇಷವಾದ ಪ್ರಸಾದವೆಂದೂ ಹೇಳಿ ರಾಜನನ್ನು ಸಾಗರಿಕೆಯ ಬಳಿ ಕರೆದುಕೊಂಡು ಹೋಗುತ್ತಾಳೆ. ವಿದೂಷಕನೂ ಚಿತ್ರಫಲಕದೊಡನೆ ಅವರನ್ನು ಹಿಂಬಾಲಿಸುತ್ತಾನೆ. ರಾಜನು ಸಾಗರಿಕೆಯ ರೂಪಲಾವಣ್ಯಗಳನ್ನು ಕಣ್ಣಾರ ಕಂಡು ಅಪ್ರತಿಭನಾಗುತ್ತಾನೆ. ಸಾಗರಿಕೆ ಸುಸಂಗತೆಯ ಮೇಲೆ ಕೋಪಿಸಿಕೊಳ್ಳುತ್ತಾಳೆ. ಆಗ ಸುಸಂಗತೆ ‘ಈಕೆ ತುಂಬಾ ಕೋಪಿಷ್ಠೆ. ಆದ್ದರಿಂದ ಕೈಹಿಡಿದು ಈಕೆಯನ್ನು ಸಂತೈಸು’ ಎಂದು ರಾಜನಿಗೆ ಹೇಳುತ್ತಾಳೆ. ರಾಜನು ಹಾಗೆಯೇಮಾಡಿ ಸ್ಪರ್ಶಸುಖವನ್ನನುಭವಿಸುತ್ತಾನೆ. ಸಾಗರಿಕೆ ತುಂಬಾ ಕೋಪದಿಂದ ನದಿಯನ್ನು ನೋಡುತ್ತಾಳೆ. ಇದನ್ನು ಕಂಡು ವಿದೂಷಕನು — ‘ಈಕೆ ಬೇರೆ ವೇಷೀವಾಸವದತ್ತೆಯೇ!’

ಎನ್ನುತ್ತಾನೆ. ಮಹಾರಾಣಿಯೇ ಅಲ್ಲಿಗೆ ಬಂದು ಬಿಟ್ಟಳೆಂದು ಭ್ರಮಿಸಿ ರಾಜನು ಸಾಗರಿಕೆಯ ಕೈಬಿಟ್ಟುಬಿಡುತ್ತಾನೆ. ಸಾಗರಿಕೆ ಸುಸಂಗತೆಯರು ತಮಾಲ ವೃಕ್ಷದ ಮರೆಯಿಂದ ಹೊರಟುಹೋಗುತ್ತಾರೆ. ಆಮೇಲೆ ವಿದೂಷಕನ ಮಾತಿನ ಅರ್ಥವನ್ನು ತಿಳಿದು ರಾಜ ಖಿನ್ನನಾಗಿ ವಿದೂಷಕನನ್ನು ಬೈಯುತ್ತಾನೆ.

ಸ್ವಲ್ಪ ಹೊತ್ತಿನಲ್ಲಿ, ನವಮಾಲಿಕೆಯು ಕುಸುಮಿತವಾಗಿರುವ ಆಶ್ಚರ್ಯವನ್ನು ನೋಡಲು ವಾಸವದತ್ತೆಯು ಕಾಂಚನಮಾಲೆಯ ಜತೆಯಲ್ಲಿ ಆಕಡೆಯೇ ಬಂದು, ರಾಜನನ್ನು ಕಂಡು ನವಮಾಲಿಕೆಯ ವಿಚಾರವಾಗಿ ಆತನನ್ನೇ ಕೇಳುತ್ತಾಳೆ. ಅವನು ನಗುತ್ತಾ, 'ಇಬ್ಬರೂ ಜತೆಯಲ್ಲೇ ಹೋಗಿ ನೋಡೋಣ' ಎನ್ನುತ್ತಾನೆ. ನವಮಾಲಿಕೆ ರಾಜನಿಂದ ಪರಿಗ್ರಹೀತವಾದ ಲತೆ. ಅದು ಅಕಾಲದಲ್ಲಿ ಕುಸುಮಿತವಾಗಿಬಿಟ್ಟಿತು. ತನ್ನ ನೆಚ್ಚಿನ ಮಾಧವೀಲತೆ ಮಾತ್ರ ಹಾಗೆಯೇ ಇತ್ತು. ಇದರಿಂದ ರಾಣಿಯು ರಾಜನ ನಗುವನ್ನು ಸಹಿಸಲಾರದೆ ಅಲ್ಲಿಂದ ಹೊರಡಲು ಯತ್ನಿಸುತ್ತಾಳೆ. ಅದನ್ನು ನೋಡಿ ವಿದೂಷಕನು ಸಂತೋಷದಿಂದ ಕೈಯೆತ್ತಿ ಕುಣಿಯುತ್ತಾನೆ. ಆಗ ಅವನ ಕಂಕುಳಲ್ಲಿದ್ದ ಚಿತ್ರಫಲಕವು ಕೆಳಗೆ ಬೀಳುತ್ತದೆ. ಕಾಂಚನಮಾಲೆ ಅದನ್ನು ಎತ್ತಿಕೊಂಡು ರಾಣಿಗೆ ತೋರಿಸುತ್ತಾಳೆ. ಮಹಾರಾಜ ಸಾಗರಿಕೆ ಇಬ್ಬರೂ ಪಕ್ಕಪಕ್ಕದಲ್ಲಿ ಚಿತ್ರಿತರಾಗಿದ್ದಾರೆ! ನೋಡಿ ರಾಣಿಯ ಕೋಪ ಮಿತಿಮೀರುತ್ತದೆ. 'ಇದೇನು?' ಎಂದು ರಾಜನನ್ನು ಕೇಳುತ್ತಾಳೆ. ರಾಜನೂ ವಿದೂಷಕನೂ ತಮ್ಮ ಬುದ್ಧಿಯನ್ನೆಲ್ಲಾ ಖರ್ಚುಮಾಡಿ ಹೇಳುವ ಸಮಾಧಾನ ಅವಳಿಗೆ ಒಪ್ಪಿಗೆಯಾಗದೆ, ರಾಜನ ವಿನಯದ ಮಾತುಗಳಿಗೂ ಕಿವಿಗೊಡದೆ, ಅಕಾಲದ ಸುಂಟರಗಾಳಿಯಂತೆ ಸಖಿಯೊಡನೆ ಹೊರಟುಹೋಗುತ್ತಾಳೆ. ರಾಜನೂ ಅವಳನ್ನು ಸಮಾಧಾನಪಡಿಸಲು ಅರಮನೆಗೇ ಹೋಗುತ್ತಾನೆ.

(ಇಲ್ಲಿಗೆ ಕದಳೀಗೃಹವೆಂಬ ಎರಡನೆಯ ಅಂಕ)

**ಅಂಕ ೩**—ಚಿತ್ರಫಲಕವೃತ್ತಾಂತದಿಂದ ಸಂದೇಹಗೊಂಡ ಮಹಾರಾಣಿಯು ಸಾಗರಿಕೆಯ ಮೇಲೆ ಸರಿಯಾಗಿ ಕಾವಲಿರಬೇಕೆಂದು ಸುಸಂಗತೆಗೆ ಹೇಳಿ ಅವಳಿಗೆ ಪಾರಿತೋಷಿಕವಾಗಿ ತಾನು ಉಡುವ ಉಡುಪೊಂದನ್ನು ಕೊಟ್ಟಿದ್ದಾಳೆ. ಆ ಉಡುಪಿನಿಂದ ಸಾಗರಿಕೆ ಮಹಾರಾಣಿಯಂತೆಯೂ, ತಾನು ಕಾಂಚನಮಾಲೆಯಂತೆಯೂ ವೇಷಧರಿಸಿಕೊಂಡು ಕತ್ತಲೆಯಾದಮೇಲೆ ಚಿತ್ರಶಾಲೆಯ ಬಾಗಿಲಿನಲ್ಲಿ ಕಾದಿರುವುದಾಗಿಯೂ, ಆಗ ವಿದೂಷಕನು ಬಂದರೆ ಅವನೊಡನೆ ಹೊರಟು ಮಾಧವೀಲತಾಮಂಟಪದಲ್ಲಿ ಮಹಾರಾಜನನ್ನು ಸಾಗರಿಕೆ ಸಂಧಿಸು

ವಂತೆ ಮಾಡುವುದಾಗಿಯೂ ಸುಸಂಗತೆ ವಿದೂಷಕನಿಗೆ ಮಾತುಕೊಟ್ಟಿದ್ದಾಳೆ. ವಿದೂಷಕ-ಸುಸಂಗತೆಯರ ಈ ಏರ್ಪಾಟನ್ನು ತಾನು ಹೊಂಚು ಕೇಳಿದುದಾಗಿ ಮಹಾರಾಣಿಯ ಚೇಟಿ ಕಾಂಚನಮಾಲೆ ಇನ್ನೊಬ್ಬ ಚೇಟಿ ಮದನಿಕೆಗೆ ತಿಳಿಸುತ್ತಾಳೆ. (ಪ್ರವೇಶಕ)

ರಾಜನು ಮದನತಾಪದಿಂದ ಹಂಬಲಿಸುತ್ತಿದ್ದಾನೆ. ಆಗ ವಿದೂಷಕನು ಬಂದು ರಾತ್ರಿ ಕತ್ತಲೆಯಾದಮೇಲೆ ಅವನು ಮಾಧವೀಮಂಟಪದಲ್ಲಿ ಸಾಗರಿಕೆಯನ್ನು ಸಂಧಿಸಲು ಮಾಡಿರುವ ಏರ್ಪಾಟನ್ನು ತಿಳಿಸುತ್ತಾನೆ. ಇವರು ಮಾತಾಡುತ್ತಿರುವಂತೆಯೇ ಸಂಜೆಯಾಗಿ ಕತ್ತಲೆ ಹರಡುತ್ತದೆ. ಆಮೇಲೆ ರಾಜನನ್ನು ಮಾಧವೀಲತಾಮಂಟಪಕ್ಕೆ ಕರೆದುಕೊಂಡು ಹೋಗಿ, ಅಲ್ಲೇ ಇರುವಂತೆ ಅವನಿಗೆ ಹೇಳಿ, ವಿದೂಷಕನು ಮಾತ್ರ ಸುಸಂಗತೆಯು ಹೇಳಿದ್ದಂತೆ ಚಿತ್ರಶಾಲೆಯ ಬಾಗಿಲಿಗೆ ಬರುತ್ತಾನೆ.

ಇಷ್ಟರಲ್ಲಿ ಮಹಾರಾಣಿ ವಾಸವದತ್ತೆಯು ಸುಸಂಗತೆ-ವಿದೂಷಕರ ಈ ಏರ್ಪಾಟನ್ನು ಕಾಂಚನಮಾಲೆಯಿಂದ ತಿಳಿದು ಸುಸಂಗತೆಯನ್ನು ಗೋಪ್ಯವಾಗಿ ಬಂಧಿಸಿಟ್ಟು, ಕಾಂಚನಮಾಲೆಯನ್ನು ಜತೆಯಲ್ಲಿ ಕರೆದುಕೊಂಡು ಚಿತ್ರಶಾಲೆಯ ಬಾಗಿಲಿಗೆ ಬರುತ್ತಾಳೆ. ಇಬ್ಬರೂ ಮುಖಕ್ಕೆ ಅವಗುಂಠನ ಹಾಕಿಕೊಂಡಿರುತ್ತಾರೆ. ಚಿತ್ರಶಾಲೆಯ ಒಳಿ ಕಾಂಚನಮಾಲೆ ವಿದೂಷಕನಿಗೆ ಸಂಜ್ಞೆ ಮಾಡುತ್ತಾಳೆ. ಅವನು ಸುಸಂಗತೆಯೇ ಅವಳೆಂದೂ ಅವಳ ಜತೆಯಲ್ಲಿದ್ದ ಮಹಾರಾಣಿಯೇ ಸಾಗರಿಕೆಯೆಂದೂ ಭಾವಿಸಿ ಇಬ್ಬರನ್ನೂ ಮಾಧವೀಲತಾಮಂಟಪಕ್ಕೆ ಕರೆದುಕೊಂಡು ಹೋಗುತ್ತಾನೆ. ಮಹಾರಾಜನೂ ಸಾಗರಿಕೆಯ ಹಂಬಲ ಮುತ್ತಿ ಸುತ್ತಲೂ ಹರಡಿದ್ದ ಕತ್ತಲೆಯಲ್ಲಿ ಅವರನ್ನು ಸುಸಂಗತೆ-ಸಾಗರಿಕೆಯರೆಂದೇ ಭಾವಿಸಿ, ಮಹಾರಾಣಿಯ ಹತ್ತಿರ ಹೋಗಿ 'ಪ್ರಿಯೆ ಸಾಗರಿಕೆ, ಯಾವ ಶಂಕೆಯೂ ಇಲ್ಲದೆ ಬೇಗ ನನ್ನನ್ನು ಆಲಿಂಗಿಸಿ ಕೊಂಡು, ಮನ್ಮಥತಾಪದಿಂದ ಕಂಗೆಟ್ಟಿರುವ ನನ್ನ ಅಂಗಗಳನ್ನು ಸಂತೋಷಪಡಿಸು' ಎಂದು ಬೇಡುತ್ತಾನೆ. ವಿದೂಷಕನೂ 'ಪೂಜ್ಯೆ ಸಾಗರಿಕೆ, ಧೈರ್ಯವಾಗಿ ಪ್ರಿಯವಯಸ್ಯನೊಡನೆ ಮಾತಾಡು. ಸದಾಕುಪಿತಳಾದ ದೇವೀ ವಾಸವದತ್ತೆಯ ಕಟುವಚನಗಳಿಂದ ಕಿವಿಗಳು ಈಗಲೂ ಕಿರುಗುಟ್ಟಿವೆ: ನಿನ್ನ ಮಧುರವಚನಗಳ ಉಚ್ಚಾರಣೆಯಿಂದ ಆಹ್ಲಾದಗೊಳ್ಳಲಿ' ಎಂದು ಹೇಳುತ್ತಾನೆ. ವಾಸವದತ್ತೆಗೆ ಕೋಪವೇರುತ್ತದೆ. ಅಷ್ಟರಲ್ಲಿ ಚಂದ್ರೋದಯವಾಗಿರುವುದನ್ನು ಗಮನಿಸಿ, ವಾಸವದತ್ತೆ ರೋಷದಿಂದ ಅವ

ಗುಂಠನವನ್ನು ತೆಗೆದುಹಾಕಿ --'ಆರ್ಯಪುತ್ರ, ನೋಡು, ನಾನು ಸತ್ಯವಾಗಿಯೂ ಸಾಗರಿಕೆಯೇ!' ಎಂದು ಹೀಯಾಳಿಸುತ್ತಾಳೆ. ರಾಜನಿಗೆ ದಿಕ್ಕುತೋಚದಂತಾಗಿ ಅವಳ ಮುಂದೆ ಮಂಡಿಯೂರಿ ಕೈಮುಗಿದು ಅಡ್ಡಬಿದ್ದು 'ಪ್ರಿಯೆ, ಪ್ರಸನ್ನಳಾಗು' ಎಂದು ದೈನ್ಯದಿಂದ ಬೇಡುತ್ತಾನೆ. ವಾಸವದತ್ತೆಯ ಕೋಪ ಇಳಿಯುವುದೇ ಇಲ್ಲ. 'ಭಟ್ಟಿಣಿ, ಪ್ರಸನ್ನಳಾಗು; ಈರೀತಿ ಕಾಲಿಗೆ ಬಿದ್ದ ಮಹಾರಾಜನನ್ನು ಬಿಟ್ಟುಬಿಟ್ಟು ಹೋದರೆ ಆಮೇಲೆ ಪಶ್ಚಾತ್ತಾಪ ಪಡಬೇಕಾಗುತ್ತದೆ' ಎಂದು ಕಾಂಚನಮಾಲೆ ಎಷ್ಟೇ ಹೇಳಿದರೂ ಲಕ್ಷಿಸದೆ ಕೋಪದಿಂದ ಹೊರಟು ಹೋಗುತ್ತಾಳೆ.

ಈ ಎಲ್ಲಾ ಅನರ್ಥವೂ ವಿದೂಷಕನಿಂದಾಯಿತೆಂದು ರಾಜನು ಅವನ ಮೇಲೆ ಸಿಟ್ಟಾಗಲು, ಅವನು ಮಾತುಬದಲಾಯಿಸಿ, 'ಕುಪಿತಳಾದ ಮಹಾರಾಣಿ ಏನು ಮಾಡುವಳೋ ತಿಳಿಯುವಂತಿಲ್ಲ. ಸಾಗರಿಕೆಯ ಜೀವವಂತೂ ದುಷ್ಕರ' ಎಂದು ಹೇಳುತ್ತಾನೆ. ಇದನ್ನು ಕೇಳಿ ರಾಜನು ಪುನಃ ಸಾಗರಿಕೆಗಾಗಿ ಹಂಬಲಿಸುತ್ತಾ ಮಹಾರಾಣಿಯು ಪ್ರಸನ್ನತೆಯನ್ನು ಸಂಪಾದಿಸದಿದ್ದರೆ ಏನೇನು ಅನರ್ಥ ಸಂಭವಿಸುವುದೋ ಎಂದು ಆಕೆಯನ್ನೇ ನೋಡಲು ವಿದೂಷಕನೊಡನೆ ಹೋಗುತ್ತಾನೆ.

ಈ ಕಡೆ ಸುಸಂಗತೆ ಬಂಧಿತಳಾಗಿಬಿಟ್ಟದ್ದುದರಿಂದ ಸಾಗರಿಕೆ ಏನು ಮಾಡಬೇಕೆಂದು ತಿಳಿಯದೆ, ತನ್ನ ಪ್ರಿಯನನ್ನು ಸಂಧಿಸುವ ಅವಕಾಶವನ್ನು ಕಳೆದುಕೊಳ್ಳಲು ಇಷ್ಟವಿಲ್ಲದೆ, ಸುಸಂಗತೆಯಲ್ಲಿದ್ದ ಮಹಾರಾಣಿಯ ಉಡುಪನ್ನುಟ್ಟು ಮಹಾರಾಣಿಯಂತೆ ವೇಷಧರಿಸಿ ಚಿತ್ರಶಾಲೆಯ ಬಾಗಿಲಿಗೆ ಸ್ವಲ್ಪ ತಡವಾಗಿ ಬಂದು ನೋಡುತ್ತಾಳೆ, ವಿದೂಷಕನು ಇಲ್ಲವೇ ಇಲ್ಲ! ಕಣ್ಣೀರಿಡುತ್ತಾ, 'ಈಗ ನೇಣು ಹಾಕಿಕೊಂಡು ಸಾಯುವುದೇ ಲೇಸು' ಎಂದು ತೀರ್ಮಾನಿಸಿ ಅಶೋಕ ವೃಕ್ಷದ ಕಡೆ ಹೋಗುತ್ತಾಳೆ. ದಾರಿಯಲ್ಲಿ ವಿದೂಷಕನಿಗೆ ಅವಳ ಹೆಜ್ಜೆಸದ್ದು ಕೇಳಿಬರುತ್ತದೆ. ಅವನು ಗಮನಿಸಿ ನೋಡುವ ವೇಳೆಗೆ, ಅವಳು ಲತೆಯ ಕುಣಿಕೆಯನ್ನು ಕುತ್ತಿಗೆಗೆ ಹಾಕಿಕೊಳ್ಳುತ್ತಾಳೆ. ಅದನ್ನು ನೋಡಿ "ವಾಸವದತ್ತೆ ನೇಣುಹಾಕಿಕೊಳ್ಳುತ್ತಿದ್ದಾಳೆ! ರಕ್ಷಿಸು, ರಕ್ಷಿಸು" ಎಂದು ಕೂಗಿಕೊಳ್ಳುತ್ತಾನೆ. ಕೂಡಲೇ ರಾಜನು ಅಲ್ಲಿಗೆ ಹೋಗಿ, ಅವಳ ಕುತ್ತಿಗೆಯಿಂದ ಲತಾಪಾಶವನ್ನು ತೆಗೆದುಹಾಕಿ, ಸಾಗರಿಕೆಯೇ ಅವಳು ಎಂಬುದನ್ನು ಕಂಡು, ಅವಳನ್ನು ಆಲಿಂಗಿಸಿಕೊಂಡು ಸ್ಪರ್ಶಸುಖವನ್ನನುಭವಿಸುತ್ತಾನೆ.

ಇಷ್ಟರಲ್ಲಿ ಮಹಾನುಭಾವಳಾದ ವಾಸವದತ್ತೆ 'ಹಾಗೆ ಕಾಲಿಗೆ ಬಿದ್ದ ಆರ್ಯಪುತ್ರನನ್ನು ಅಲಕ್ಷಿಸಿ ಬಂದು ನಾನು ತುಂಬಾ ನಿಷ್ಠುರವಾದ ಕೆಲಸ ಮಾಡಿಬಿಟ್ಟೆ' ಎಂದು ಪಶ್ಚಾತ್ತಾಪಪಡುತ್ತಾ, ಮಹಾರಾಜನನ್ನು ಸಂತೈಸಲು, ಕಾಂಚನಮಾಲೆಯ ಜತೆಯಲ್ಲಿ ಪುನಃ ಆ ಕಡೆಯೇ ಬರುತ್ತಾಳೆ. ಅಶೋಕ ವೃಕ್ಷದ ಹತ್ತಿರ ಮಹಾರಾಜನು ಯಾರೊಡನೆಯೋ ಮಾತಾಡುತ್ತಿರುವುದು ಕೇಳಿಸಲು, ಹಾಗೆಯೇ ಇಬ್ಬರೂ ಹೊಂಚು ಕೇಳುತ್ತಾ ನೋಡುತ್ತಾರೆ,—ಸಾಗರಿಕೆಯೊಡನೆ ಮಹಾರಾಜನು ಪ್ರೇಮಾಲಾಪದಲ್ಲಿದ್ದಾನೆ! ವಾಸವದತ್ತೆ ಕೋಪ ತಡೆಯುವುದಕ್ಕಾಗದೆ ಹತ್ತಿರ ಹೋಗಿ ಗಂಡನನ್ನು ಕುರಿತು—'ಇದೀಗ ನಿನಗೆ ತಕ್ಕದ್ದು!' ಎನ್ನುತ್ತಾಳೆ. ರಾಜನು ಬೆಪ್ಪಾಗುತ್ತಾನೆ. 'ವೇಷ ಸಾದೃಶ್ಯದಿಂದ ಮೋಸಹೋಗಿ ನೀನೇ ಎಂದು ತಿಳಿದು ನಾವು ಇಲ್ಲಿಗೆ ಬಂದೆವು; ಕ್ಷಮಿಸು' ಎಂದು ಮಹಾರಾಜನು ಅವಳ ಕಾಲಿಗೆ ಬೀಳುತ್ತಾನೆ. ವಾಸವದತ್ತೆ ಅದೊಂದನ್ನೂ ಲಕ್ಷಿಸದೆ, ವಿದೂಷಕನನ್ನು ಬಂಧಿಸಿ ಅವನನ್ನೂ ಸಾಗರಿಕೆಯನ್ನೂ ಕರೆದುಕೊಂಡು ಅರಮನೆಗೆ ಹೊರಟುಹೋಗುತ್ತಾಳೆ! ರಾಜನೂ ಖಿನ್ನನಾಗಿ, ಏನು ಮಾಡಬೇಕೆಂದು ತಿಳಿಯದೆ, ಅಂತಃಪುರದ ಕಡೆಯೇ ಹೋಗುತ್ತಾನೆ.

(ಇಲ್ಲಿಗೆ ಸಂಕೇತಕ ಎಂಬ ಮೂರನೆಯ ಅಂಕ)

**ಅಂಕ ೪.** ಮಹಾರಾಣಿಯು ಕ್ರಮೇಣ ಪ್ರಸನ್ನಳಾಗಿ ಸುಸಂಗತೆ ವಿದೂಷಕರನ್ನು ಬಂಧನದಿಂದ ಬಿಡುಗಡೆ ಮಾಡಿ ವಿದೂಷಕನಿಗೆ ವಿಶೇಷವಾದ ಪಾರಿತೋಷಿಕಗಳನ್ನು ಕೊಟ್ಟಿದ್ದಾಳೆ. ಆದರೆ ಸಾಗರಿಕೆಯನ್ನು ಮಾತ್ರ ಉಜ್ಜಯನಿಗೆ ಕಳುಹಿಸಿರುವುದಾಗಿ ಪ್ರವಾದ ಹುಟ್ಟಿಸಿ, ಅರ್ಧರಾತ್ರಿಯ ಸಮಯದಲ್ಲಿ ಎಲ್ಲಿಗೋ ಕರೆದೊಯ್ದು ಬಂಧಿಸಿಡುತ್ತಾಳೆ. ಹೊರಡುವುದಕ್ಕೆ ಮುಂಚೆ ಸಾಗರಿಕೆ ತನ್ನಲ್ಲಿದ್ದ ರತ್ನಮಾಲೆಯನ್ನು ಸುಸಂಗತೆಯ ಕೈಯಲ್ಲಿಟ್ಟು ಯಾವನಾದರೂ ಬ್ರಾಹ್ಮಣನಿಗೆ ದಾನಮಾಡಿಬಿಡುವಂತೆ ತಿಳಿಸಿ ಹೋಗುತ್ತಾಳೆ. ಆ ರತ್ನಮಾಲೆಯನ್ನು ಸುಸಂಗತೆ ವಿದೂಷಕನಿಗೆ ಕೊಟ್ಟು, ನಡೆದಿರುವ ಸಮಾಚಾರವನ್ನೆಲ್ಲಾ ಅವನಿಗೆ ತಿಳಿಸುತ್ತಾಳೆ. ಆ ರತ್ನಮಾಲೆಯನ್ನು ನೋಡಿ, 'ಸಾಮಾನ್ಯ ಜನರಿಗೆ ದುರ್ಲಭವಾದ ಈ ಆಭರಣವೇ ಆಕೆ ದೊಡ್ಡವಂಶದಲ್ಲಿ ಹುಟ್ಟಿರಬೇಕೆಂದು ಹೇಳುತ್ತಿದೆ. ಇರಲಿ; ಸಾಗರಿಕೆಯ ವಿರಹದಿಂದ ಕುಗ್ಗಿಹೋಗಿರುವ ಪ್ರಿಯವಯಸ್ಯನನ್ನು ಇದರಿಂದಲಾದರೂ ವಿನೋದಗೊಳಿಸುತ್ತೇನೆ.' ಎಂದು ಹೇಳುತ್ತಾ ರಾಜನ ಬಳಿಗೇ ಹೋಗುತ್ತಾನೆ. (ಪ್ರವೇಶಕ)

(ದೃಶ್ಯ—ರಾಜಾಸ್ಥಾನ) ವಿದೂಷಕನು ರಾಜನಲ್ಲಿಗೆ ಬಂದು ಸಾಗರಿಕೆಯ ವೃತ್ತಾಂತವನ್ನು ತಿಳಿಸಿ ಅವಳ ರತ್ನಮಾಲೆಯನ್ನು ಅವನಿಗೆ ಕೊಡುತ್ತಾನೆ. ರಾಜನು ಅದನ್ನು ಎದೆಗೆ ಅಪ್ಪಿಕೊಂಡು, ಬಳಿಕ ವಿದೂಷಕನಿಗೇ ಕೊಟ್ಟು 'ನೀನು ಧರಿಸಿಕೋ. ಇದನ್ನು ನೋಡುತ್ತಿದ್ದಾದರೂ ಧೈರ್ಯತಾಳುತ್ತೇನೆ.' ಎಂದು ಹೇಳುತ್ತಾನೆ. ವಿದೂಷಕನು ಹಾಗೆಯೇ ಮಾಡುತ್ತಾನೆ.

ಇಷ್ಟರಲ್ಲಿ ಕೋಸಲ ರಾಜ್ಯದ ಮೇಲೆ ದಂಡೆತ್ತಿ ಹೋಗಿದ್ದ ರುಮಣ್ವಂತನ ವಿಜಯವಾರ್ತೆಯನ್ನು ವಿಜಯವರ್ಮನು ತರುತ್ತಾನೆ. ಅದನ್ನು ಕೇಳಿ ರಾಜ ವಿದೂಷಕರಿಬ್ಬರೂ ಸಂತೋಷಗೊಂಡಿರುವಾಗ ಕಾಂಚನಮಾಲೆ ಬಂದು, ಉಜ್ಜಯಿನಿಯ ಇಂದ್ರಜಾಲಿಕನೊಬ್ಬನ ಪ್ರದರ್ಶನವನ್ನು ಮಹಾರಾಜನು ನೋಡಬೇಕೆಂದು ಮಹಾರಾಣಿಯು ಬಿನ್ನವಿಸುವುದಾಗಿ ಹೇಳುತ್ತಾಳೆ. ರಾಜನು ವಾಸವದತ್ತೆಯನ್ನೂ ಕರೆಸಿಕೊಂಡು ಅವಳ ಜತೆಯಲ್ಲೇ ಬಗೆಬಗೆಯ ಇಂದ್ರಜಾಲ ಪ್ರದರ್ಶನವನ್ನು ನೋಡುತ್ತಾನೆ.

ಈ ಮಧ್ಯೆ ಸಿಂಹಳದ ಪ್ರಧಾನ ಅಮಾತ್ಯ ವಸುಭೂತಿ ರಾಜನನ್ನು ಕಾಣಲು ಬರುತ್ತಾನೆ. ಆದ್ದರಿಂದ ಇಂದ್ರಜಾಲದ ಪ್ರದರ್ಶನವನ್ನು ಮಧ್ಯೆಯೇ ನಿಲ್ಲಿಸಬೇಕಾಗಿ ಬರುತ್ತದೆ. ಇಂದ್ರಜಾಲಿಕನು ಮಾತ್ರ, 'ನನ್ನ ಇನ್ನೊಂದು ಪ್ರದರ್ಶನವನ್ನು ಮಹಾರಾಜರು ನೋಡಲೇ ಬೇಕು' ಎಂದು ಹೇಳಿ ಹೋಗುತ್ತಾನೆ. ವಸುಭೂತಿಯನ್ನು ಸ್ವಾಗತಿಸಿ ಒಳಕ್ಕೆ ಕರೆತರಲು ವಿದೂಷಕನು ಹೋಗುತ್ತಾನೆ. ಅವನ ಕತ್ತಿನಲ್ಲಿದ್ದ ರತ್ನಮಾಲೆಯನ್ನು ನೋಡಿ, ರತ್ನಾವಳಿಗೆ ಪ್ರಸ್ಥಾನ ಸಮಯದಲ್ಲಿ ಸಿಂಹಳೇಶ್ವರನು ಕೊಟ್ಟಿದ್ದ ರತ್ನಮಾಲೆಯೇ ಅದೆಂದು ಗುರ್ತಿಸಿದರೂ ದೊಡ್ಡ ರಾಜಕುಲದಲ್ಲಿ ರತ್ನಬಾಹುಳ್ಯವಿರುವುದರಿಂದ ಆಭರಣಗಳ ಸಾದೃಶ್ಯ ಸಂಭಾವಿತವೇ ಆದುದೆಂದು ಸಮಾಧಾನ ತಂದುಕೊಳ್ಳುತ್ತಾನೆ. ಆಮೇಲೆ ಬಾಭ್ರವ್ಯನೊಡನೆ ರಾಜನ ಬಳಿ ಹೋಗಿ ಯೋಗಕ್ಷೇಮದ ಪ್ರಸ್ತಾಪದಲ್ಲಿ, ತಾವು ರತ್ನಾವಳಿಯನ್ನು ಮಹಾರಾಜರಲ್ಲಿಗೆ ಕರೆತರುವಾಗ ಹಡಗು ಒಡೆದು ತಾವುಮಾತ್ರ ಹೇಗೋ ದಡಸೇರಿ ಬಂದ ವೃತ್ತಾಂತವನ್ನು ತಿಳಿಸುತ್ತಾನೆ. ಮಹಾರಾಣಿಯು ತನ್ನ ತಂಗಿ ರತ್ನಾವಳಿ ಸಮುದ್ರದಲ್ಲಿ ಮುಳುಗಿಯೇ ಹೋದಳೆಂದು ಭಾವಿಸಿ ಶೋಕಿಸುತ್ತಾಳೆ. ರಾಜನು 'ದೈವಗತಿಯನ್ನರಿಯುವುದಕ್ಕಾಗುವುದಿಲ್ಲ; ಸಂತೈಸಿಕೋ' ಎಂದು ಮಹಾರಾಣಿಗೆ ಸಮಾಧಾನ ಹೇಳುತ್ತಾನೆ. ವಿವರವಾಗಿ ವೃತ್ತಾಂತವೆಲ್ಲವನ್ನೂ ಹೇಳಬೇಕೆಂದು ಬಾಭ್ರವ್ಯನನ್ನು ರಾಜನು ಕೇಳುತ್ತಾನೆ. ಆದರೆ ಅಷ್ಟರಲ್ಲಿ ಅಂತಃಪುರದೊಳಗೆ ಬೆಂಕಿಯುರಿ ಕಾಣಿಸಿ

ಕೊಂಡಿರುವುದಾಗಿ ಆರ್ತಘೋಷ ಕೇಳಿಬರುತ್ತದೆ. ವಾಸವದತ್ತೆ ಗಾಬರಿಗೊಂಡು 'ಸಂಕೋಲೆಗಳಿಂದ ಬಂಧಿತಳಾದ ಸಾಗರಿಕೆ ಅಂತಃಪುರದಲ್ಲಿ ವಿಪತ್ತಿಗೀಡಾಗಿದ್ದಾಳೆ. ಅವಳನ್ನು ರಕ್ಷಿಸಬೇಕು' ಎಂದು ರಾಜನಲ್ಲಿ ಮೊರೆಯಿಡುತ್ತಾಳೆ. ರಾಜನು ಕೂಡಲೇ ಆ ಕಡೆ ಧಾವಿಸಿ, ಬೆಂಕಿಯೊಳಕ್ಕೆ ಪ್ರವೇಶಿಸುತ್ತಾನೆ. ಅವನ ಹಿಂದೆಯೇ ವಸುಭೂತಿ, ಬಾಭ್ರವ್ಯ, ವಾಸವದತ್ತೆ ಎಲ್ಲರೂ ಹೋಗುತ್ತಾರೆ. ಆದರೆ ಕ್ಷಣಮಾತ್ರದಲ್ಲಿ ರಾಜನು ಸಾಗರಿಕೆಯನ್ನು ಎತ್ತಿಕೊಂಡು ಹೊರಕ್ಕೆ ತರುತ್ತಾನೆ. ಅಷ್ಟರಲ್ಲಿ ಇದ್ದಕ್ಕಿದ್ದಂತೆ ಬೆಂಕಿಯುರಿ ಮಾಯವಾಗಿ ಬಿಡುತ್ತೆ. ರಾಜನು ಇದೆಲ್ಲಾ ನಿಜವೋ ಸ್ವಪ್ನವೋ ಎಂದು ವಿಸ್ಮಿತನಾಗುತ್ತಾನೆ. ಇಂದ್ರಜಾಲಿಕನ ಕೊನೆಯ ಮಾತುಗಳನ್ನು ನೆನಪು ಮಾಡಿಕೊಟ್ಟು, ವಿದೂಷಕನು 'ಇದೆಲ್ಲಾ ಇಂದ್ರಜಾಲ' ಎನ್ನುತ್ತಾನೆ.

ವಸುಭೂತಿ ಸಾಗರಿಕೆಯನ್ನು ಗುರ್ತಿಸುತ್ತಾನೆ. ಅವಳೂ ವಸುಭೂತಿಯನ್ನು ಗುರ್ತಿಸಿ ತನ್ನ ಪ್ರಕೃತಾವಸ್ಥೆಯನ್ನೂ ತಾಯಿ ತಂದೆಯನ್ನೂ ಸ್ಮರಿಸಿ ಮೂರ್ಛಿತಳಾಗುತ್ತಾಳೆ. ಅವಳೇ ಸಿಂಹಳ ರಾಜಪುತ್ರಿ ರತ್ನಾವಳಿಯೆಂಬುದನ್ನು ಬಾಭ್ರವ್ಯನು ರಾಜನಿಗೂ ಮಹಾರಾಣಿಗೂ ತಿಳಿಸುತ್ತಾನೆ. ಮಹಾರಾಣಿ ತಾನು ಆ ವರೆಗೆ ಅವಳ ಬಗ್ಗೆ ತೋರಿಸಿದ್ದ ನಿಷ್ಠುರ ವರ್ತನೆಗಾಗಿ ನಾಚುತ್ತಾಳೆ. ಯೌಗಂಧರಾಯಣನಿಗೆ ಎಲ್ಲವೂ ತಿಳಿದಿದ್ದರೂ ತನಗೆ ತಿಳಿಸದೆ ಗುಟ್ಟಾಗಿಟ್ಟಿದ್ದ ಎಂದು ತಿಳಿದ ಮೇಲೆ ರಾಜ-ರಾಣಿಯರಿಬ್ಬರಿಗೂ ಪರಿತಾಪವಾಗುತ್ತದೆ.

ಈ ವೇಳೆಗೆ ಸರಿಯಾಗಿ ಯೌಗಂಧರಾಯಣನೇ ಬಂದು ತಾನು ಪೂರ್ವಭಾವಿಯಾಗಿ ಅರಿಕೆ ಮಾಡದೆ ನಡೆಯಿಸಿದ ಎಲ್ಲಾ ಕೆಲಸಗಳಿಗಾಗಿಯೂ ತನ್ನನ್ನು ಮನ್ನಿಸಬೇಕೆಂದು ಮಹಾರಾಜನನ್ನು ಬೇಡುತ್ತಾನೆ. ಇಂದ್ರಜಾಲಿಕ, ಅಂತಃಪುರದಲ್ಲಿ ಅಗ್ನಿ ಮುಂತಾದುವೆಲ್ಲವೂ ತನ್ನ ಪ್ರಯೋಗವೇ ಎಂದು ತಿಳಿಸಿ, ಈಗ ತನ್ನ ತಂಗಿಯ ವಿಷಯದಲ್ಲಿ ಮಹಾರಾಣಿಯವರು ಸೂಕ್ತವಾದಂತೆ ಆಚರಿಸಬಹುದೆಂದು ಹೇಳುತ್ತಾನೆ. ವಾಸವದತ್ತೆಯೂ ಸಂತೋಷದಿಂದ ರತ್ನಾವಳಿಯ ಕೈ ಹಿಡಿದು ತನ್ನ ಗಂಡನಿಗೆ ಒಪ್ಪಿಸಿ—'ಈಕೆಯ ತೌರುಮನೆ ತುಂಬಾ ದೂರದಲ್ಲಿದೆ. ಆದ್ದರಿಂದ ಇವಳು ತನ್ನ ಬಂಧುಗಳಿಗಾಗಿ ಹಂಬಲಿಸದಂತೆ ಈಕೆಯಲ್ಲಿ ವರ್ತಿಸು' ಎಂದು ಹೇಳುತ್ತಾಳೆ. ವಸುಭೂತಿ ರತ್ನಾವಳಿಯನ್ನು ಕುರಿತು 'ರಾಜಪುತ್ರಿ, ದೇವಿಯನ್ನು ಪ್ರಣಾಮದಿಂದ ಸನ್ಮಾನಿಸು' ಎನ್ನುತ್ತಾನೆ. ರತ್ನಾವಳಿ ನಮಸ್ಕರಿಸುತ್ತಾಳೆ.

ಭರತವಾಕ್ಯದೊಡನೆ ನಾಟಕ ಸಮಾಪ್ತಿಗೊಳ್ಳುತ್ತದೆ.

## ಕಥಾಮೂಲ

ನಾಟಿಕೆಯ ಕಥಾವಸ್ತು ಕಲ್ಪಿತವಾಗಿರಬೇಕೆಂದು ಸಾಹಿತ್ಯದರ್ಪಣದಲ್ಲಿ ಹೇಳಿದೆ (ಟಿಪ್ಪಣಿ ನೋಡಿ). ಆದರೆ ರತ್ನಾವಳಿಯ ಕಥಾವಸ್ತು ಕಲ್ಪಿತವಲ್ಲ. ವತ್ಸರಾಜ ಉದಯನನ ಕಥೆಯು ಸೋಮದೇವನ ಕಥಾಸರಿತ್ಸಾಗರದಲ್ಲೂ, ಕ್ಷೇಮೇಂದ್ರನ ಬೃಹತ್ಕಥಾಮಂಜರಿಯಲ್ಲೂ, ಕ್ಷೀರಸ್ವಾಮಿಯ ಬೃಹತ್ಕಥಾ ಶ್ಲೋಕಸಂಗ್ರಹದಲ್ಲೂ, ಜೈನಬೌದ್ಧ ಸಾಹಿತ್ಯಗಳಲ್ಲೂ ಉಪಲಬ್ಧವಾಗಿದೆ. ಇವುಗಳ ಪೈಕಿ ಜೈನ ಸಾಹಿತ್ಯದಲ್ಲಿನ ಕಥೆಯು ಕ್ರಿ.ಶ. ೧೨ನೆಯ ಶತಮಾನಕ್ಕಿಂತ ಮುಂಚಿನದಲ್ಲ. ಬೌದ್ಧಕಥೆಯು ಕ್ರಿ.ಶ. ೪ನೆಯ ಶತಮಾನಕ್ಕೆ ಸೇರಿದುದು. ಕಥಾಸರಿತ್ಸಾಗರ, ಬೃಹತ್ಕಥಾಮಂಜರಿ ಎರಡೂ ೧೧ನೆಯ ಶತಮಾನದವು. ಬೃಹತ್ಕಥಾಶ್ಲೋಕಸಂಗ್ರಹವೆಂಬ (ಅಪೂರ್ಣ) ಗ್ರಂಥ ೮ರನೆಯ ಶತಮಾನಕ್ಕಿಂತ ಹಿಂದಿನದು. ಬೃಹತ್ಕಥೆಯೆಂಬ ಪೈಶಾಚಿ (ಪ್ರಾಕೃತ) ಭಾಷೆಯ ಗ್ರಂಥ ಕ್ರಿ.ಪೂ ಒಂದನೆಯ ಅಥವಾ ಎರಡನೆಯ ಶತಮಾನಕ್ಕೆ ಸೇರಿದ್ದೆಂದು ಭಾವಿಸಲಾಗಿದೆ. ಆದರೆ ಆಗ್ರಂಥ ಇನ್ನೂ ಉಪಲಬ್ಧವಾಗಿಲ್ಲ. ಕಥಾಸರಿತ್ಸಾಗರ ಮತ್ತು ಬೃಹತ್ಕಥಾ ಮಂಜರಿ ಎರಡಕ್ಕೂ ಆಧಾರವಾದ ಗ್ರಂಥಗಳು ಬೇರೆ ಬೇರೆ ಎಂಬುದನ್ನು ಬೇರೆಯ ಕಡೆ (Indian Historical Quarterly XIV) ವಿಸ್ತಾರವಾಗಿ ನಿರೂಪಿಸಲಾಗಿದೆ. ಈ ಎರಡು ಲೇಖಕರಿಗೂ ಪೈಶಾಚೀ ಬೃಹತ್ಕಥೆ ದೊರೆತಿರಲಿಲ್ಲವೆಂಬುದು ನಿರ್ವಿವಾದ. ಆದರೆ ಸೋಮದೇವನಿಗಿಂತ ಹಿಂದೆ ಬೃಹತ್ಕಥೆಯ ರೂಪಾಂತರಗಳು ಎಷ್ಟು ಇದ್ದುವೆಂಬುದು ಇನ್ನೂ ತಿಳಿದಿಲ್ಲವಾದುದರಿಂದಲೂ ಶ್ರೀಹರ್ಷನು ಸೋಮದೇವನಿಗಿಂತ ಪ್ರಾಚೀನನಾದುದರಿಂದಲೂ ಶ್ರೀಹರ್ಷನು ಯಾವ ಗ್ರಂಥದಿಂದ ಉದಯನನ ಕಥೆಯನ್ನು ತೆಗೆದುಕೊಂಡು ರೂಪಾಂತರಿಸಿದನೆಂದು ಹೇಳಲಾಗುವುದಿಲ್ಲ.

ಶ್ರೀಹರ್ಷನಿಗಿಂತ ಹಿಂದಿನ ಅನೇಕ ಪ್ರಸಿದ್ಧಕವಿಗಳು * ಉದಯನ–ವಾಸವದತ್ತೆಯರ ಪ್ರಣಯವನ್ನೂ, ಯೌಗಂಧರಾಯಣನ ಸ್ವಾಮಿಭಕ್ತಿಯನ್ನೂ

---

* ೧) ಪ್ರಾಪ್ಯಾವನ್ತೀನ್ ಉದಯನಕಥಾಕೋವಿದಗ್ರಾಮವೃದ್ಧಾನ್,
ಪ್ರದ್ಯೋತಸ್ಯ ಪ್ರಿಯದುಹಿತರಂ ವತ್ಸರಾಜೋಽತ್ರ ಜಹ್ರೇ ||
— ಕಾಳಿದಾಸನ ಮೇಘದೂತ.

೨) ....ಯೌಗಂಧರಾಯಣ ಇವ ಉದಯನಸ್ಯ ರಾಜ್ಞಃ— ಶೂದ್ರಕನ ಮೃಚ್ಛಕಟಿಕಾ.

ಅಲ್ಲಲ್ಲಿ ಉಲ್ಲೇಖಿಸಿದ್ದಾರೆ. ಇದರಿಂದಲೇ ಉದಯನನ ಕಥೆ ಪ್ರಾಚೀನ ಭಾರತದಲ್ಲಿ ಪ್ರಸಿದ್ಧವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಪ್ರತಿಜ್ಞಾಯೌಗಂಧರಾಯಣ ಮತ್ತು ಸ್ವಪ್ನವಾಸವದತ್ತ ಎಂಬ ಎರಡು ನಾಟಕಗಳೂ ವತ್ಸರಾಜ ಉದಯನನ ಕಥೆಯ ರೂಪಾಂತರವೇ. ಈ ಸ್ವಪ್ನವಾಸವದತ್ತವನ್ನೂ ರತ್ನಾವಳಿಯನ್ನೂ ಹೋಲಿಸಿದರೆ, ಭಾಷೆ ಮತ್ತು ಭಾವಗಳಲ್ಲಿ ಅವೆರಡಕ್ಕೂ ಇರುವ ಸಾಮ್ಯ ಯಾರಿಗಾದರೂ ತೋರಿ ಬರುತ್ತೆ ಎಂಬುದರಲ್ಲಿ ಸಂಶಯವಿಲ್ಲ.

| ಸ್ವಪ್ನವಾಸವದತ್ತ | ರತ್ನಾವಳೀ |
|---|---|
| ೧ ಅಥ ಪದ್ಮಾವತ್ಯಾ ಹಸ್ತೇ ಕಿಂ ನ್ಯಾಸ- ಕಾರಣಂ? | ೧ ಅಥ ಇಯಂ ದೇವೀಹಸ್ತೇ ಕಿಮನು- ಚಿಂತ್ಯ ಸ್ಥಾಪಿತಾ? |
| ೨ ದೇವ್ಯಪನಯೇನ ಕೃತಾಪರಾಧಃ ಖಲು ಅಹಂ, ತತ್ ಕ್ಷಂತುಮರ್ಹತಿ ಸ್ವಾಮೀ. | ೨ ದೇವ, ಕ್ಷಮ್ಯತಾಂ ಯದಸ್ಮಯಾ ಅನಿ- ವೇದ್ಯ ಕೃತಂ. |
| ೩ ಪ್ರಚ್ಛಾದ್ಯ ರಾಜಮಹಿಷೀಂ .. . ಕಿಂ ವಕ್ಷ್ಯತೀತಿ ಹೃದಯಂ ಪರಿಶಂಕಿತಂ ಮೇ | ೩ ಪ್ರಾರಂಭೇಽಸ್ಮಿನ್.... ....ಸ್ವೇಚ್ಛಾಚಾರೀ ಭೀತ ಇವಾಸ್ಮಿ ಭರ್ತುಃ |

ಶಾರದಾರಂಜನ ರೇ ಅವರು ತಮ್ಮಿಂದ ಸಂಪಾದಿತವಾದ ರತ್ನಾವಳಿಯ ಪೀಠಿಕೆಯಲ್ಲಿ ಸ್ವಪ್ನವಾಸವದತ್ತವು ಭಾಸನದೇ ಎಂದೂ, ಶ್ರೀಹರ್ಷನು ತನ್ನ ರತ್ನಾವಳೀನಾಟಿಕೆಯ ವಸ್ತುವನ್ನು ಅದರಿಂದಲೇ ಸಂಗ್ರಹಿಸಿದ್ದಾನೆಂದೂ ಸಿದ್ಧಾಂತಮಾಡಲು ಯತ್ನಿಸಿದ್ದಾರೆ. ಭಾಸನು ಕಾಲಿದಾಸ–ಹರ್ಷರಿಗಿಂತ ಹಿಂದಿನವನೆಂಬುದರಲ್ಲಿ ಸಂಶಯಕ್ಕವಕಾಶವಿಲ್ಲ. ಆದರೆ ಈಗ ಉಪಲಬ್ಧವಾಗಿರುವ ಸ್ವಪ್ನವಾಸವದತ್ತ ಆ ಪ್ರಾಚೀನ ಭಾಸನು ಬರೆದದ್ದೇ ಎಂಬುವುದು ಇನ್ನೂ ವಾದ ವಿವಾದ ಮಟ್ಟದಲ್ಲೇ ಇದೆ. ಅದೂ ಅಲ್ಲದೆ, ಭಾಸನು ಯಾವ ಶತಮಾನದವನೆಂಬುದೂ ಗೊತ್ತಿಲ್ಲದಿರುವಾಗ, ಅವನೂ ಬೃಹತ್ಕಥೆಯ ಉದಯನ–ಕಥೆಯನ್ನೇ ತನ್ನ ನಾಟಕಗಳಿಗೆ ಅಳವಡಿಸಿಕೊಂಡಿದ್ದಾನೆಂದು ಏಕೆ ಹೇಳಬಾರದು! ಒಟ್ಟಿನಲ್ಲಿ ಇಷ್ಟು ಹೇಳಬಹುದು. ಶ್ರೀಹರ್ಷನು ತನ್ನ ಕಾಲದಲ್ಲಿ ಪ್ರಸಿದ್ಧವಾಗಿಯೇ ಇದ್ದ ಉದಯನಕಥೆಯನ್ನು ಬೌದ್ಧಸಾಹಿತ್ಯದಿಂದಲೋ, ಅಥವಾ ಬೃಹತ್ಕಥೆಯ ಯಾವುದಾದರೊಂದು ರೂಪಾಂತರದಿಂದಲೋ ತೆಗೆದುಕೊಂಡು ತನ್ನ ರುಚಿಗೆ ತಕ್ಕಂತೆ ಅದನ್ನು ರೂಪಾಂತರಿಸಿ ಈ ರತ್ನಾವಳೀ ನಾಟಿಕೆಯನ್ನು ರಚಿಸಿರಬೇಕು. ಹೀಗೆ ನಾಟಿಕೆಯ ವಸ್ತು ಕಲ್ಪಿತವಲ್ಲದಿದ್ದರೂ ಅದರಲ್ಲಿನ ಅನೇಕ ಸನ್ನಿವೇಶಗಳು ಕಲ್ಪಿತವಾಗಿರುವುದರಿಂದಲೂ, ಶ್ರೀಹರ್ಷನ 'ರಚನಾ ಕೌಶಲ' ಅಪೂರ್ವವಾಗಿರುವುದರಿಂದಲೂ, ರತ್ನಾವಳೀ ನಾಟಿಕೆ ಎಲ್ಲರ ಮೆಚ್ಚುಗೆಯನ್ನೂ ಪಡೆದಿದೆ.

# ಪಾತ್ರಪರಿಚಯ

## ವತ್ಸರಾಜ ಉದಯನ

ರತ್ನಾವಳೀ ನಾಟಿಕೆಯ ನಾಯಕ ವತ್ಸರಾಜ ಉದಯನ. ಸುಂದರನೂ ವಿಲಾಸಿಯೂ ಆದ ಇವನು ಆದರ್ಶ 'ಧೀರಲಲಿತ' ನಾಯಕನೆಂದು ವಿಮರ್ಶಕರೆಲ್ಲಾ ಅಭಿಪ್ರಾಯಪಟ್ಟಿದ್ದಾರೆ. ರಾಜ್ಯನಿರ್ವಹಣದ ಭಾರವನ್ನೆಲ್ಲಾ ಸ್ವಾಮಿಭಕ್ತನಾದ ಮುಖ್ಯಮಂತ್ರಿ ಯೌಗಂಧರಾಯಣನಿಗೆ ವಹಿಸಿ, ನಾನಾ ಬಗೆಯ ಭೋಗವಿಲಾಸಗಳಲ್ಲಿ ನಿರಾತಂಕವಾಗಿ ನಿರತನಾಗಿರುವಂತೆ ವತ್ಸರಾಜನು ಈ ನಾಟಕದಲ್ಲಿ ಚಿತ್ರಿತನಾಗಿದ್ದಾನೆ. ಅಂಪ ಮಾತ್ರಕ್ಕೆ ಆತನಲ್ಲಿ ಶೌರ್ಯ ಔದಾರ್ಯಾದಿ ಗುಣಗಳಿರಲಿಲ್ಲವೆಂದು ಭಾವಿಸಬಾರದು. ಆತನೇ (I.27ರಲ್ಲಿ) ಹೇಳಿರುವಂತೆ ಅವನು ಶತ್ರುಗಳನ್ನು ಜಯಿಸಿ. ರಾಜ್ಯಕ್ಕೆ ಯಾವ ಭಯವೂ ಇಲ್ಲದಂತೆ ಮಾಡಿ, ಪ್ರಜಾಕ್ಷೇಮಕ್ಕೆ ಬೇಕಾದಂತಹ ಅಡಳಿತಕ್ರಮವನ್ನು ಏರ್ಪಡಿಸಿ, ಸಮರ್ಥನೂ ಸ್ವಾಮಿಭಕ್ತನೂ ಆದ ಮಂತ್ರಿಗೆ ರಾಜ್ಯನಿರ್ವಹಣದ ಕೆಲಸ ಒಪ್ಪಿಸಿ ಕೃತಕೃತ್ಯನಾಗಿದ್ದವನು.

ನೂತನಾನುರಾಗಚಿತ್ರಣವೇ ಮುಖ್ಯಗುರಿಯಾಗಿರುವ ಪ್ರಕೃತನಾಟಕದಲ್ಲಿ ವಿಲಾಸಿಯಾದ ನಾಯಕ (ವತ್ಸರಾಜ)ನ ಪ್ರೇಮ ಒಂದು ಒಗಟೆಯಂತಿದೆ. ಪಟ್ಟಮಹಿಷಿ ವಾಸವದತ್ತೆಯಲ್ಲಿ ಅವನದು ಅಗಾಧ ಪ್ರೇಮ. ಆದರೂ ತರುಣಿಯೂ ಸುಂದರಿಯೂ ಆದ ಸಾಗರಿಕೆಯನ್ನು ಕಂಡೊಡನೆ ಅವಳನ್ನೂ ಪ್ರೀತಿಸಲಾರಂಭಿಸಿ ಅವಳೊಡನೆ ಸಂಗಮಕ್ಕಾಗಿ ಹಂಬಲಿಸುತ್ತಾನೆ. ತನ್ನ ಈ ದ್ವಿಮುಖ ಪ್ರೇಮವನ್ನು (IV.18 ರಲ್ಲಿ) ವತ್ಸರಾಜನೇ ಒಂದು ಬಗೆಯಾಗಿ ಸಮರ್ಥಿಸುತ್ತಾನಾದರೂ, ಅವನು ಸಾಗರಿಕೆಯಲ್ಲಿಟ್ಟಿರುವ 'ಮಧುರ ಅನುರಾಗ'ಕ್ಕೂ, ಅಭಿಜಾತಳಾದ ಪಟ್ಟಮಹಿಷಿಯಲ್ಲಿಟ್ಟಿರುವ 'ಪ್ರೇಮ'ಕ್ಕೂ ಸಾಮರಸ್ಯವಿಲ್ಲವೆಂಬುದು ಸ್ಪಷ್ಟವಾಗಿಯೇ ಇದೆ. ಇಲ್ಲಿ ಆದರ್ಶಪ್ರೇಮದ ಪ್ರಶ್ನೆಯಿಲ್ಲ. ವತ್ಸರಾಜ ಏಕಪತ್ನೀವ್ರತಸ್ಥನಲ್ಲ. ಆಗಿನ ಕಾಲದಲ್ಲಿ ಅನೇಕ ಸ್ತ್ರೀಯರನ್ನು ಮದುವೆಯಾಗುವುದು ಬಳಕೆಯಲ್ಲಿದ್ದುದಷ್ಟೇ ಅಲ್ಲದೆ, ರಾಜರಿಗೆ ಗೌರವಾವಹವಾಗಿಯೂ ಇದ್ದಿತು. ಇದರಿಂದಲೇ 'ರಾಜಾನೋ ಬಹುವಲ್ಲಭಾಃ' ಎಂಬ ನಾಣ್ಣುಡಿ ಇನ್ನೂ ಪ್ರಚಲಿತವಾಗಿಯೇ ಇದೆ. ಆದ್ದರಿಂದ ವತ್ಸರಾಜನ ದ್ವಿಮುಖ ಪ್ರೇಮದಲ್ಲಿ ದೋಷವೇನೂ ಇಲ್ಲವೆಂದೇ ಹೇಳಬೇಕಾಗುತ್ತದೆ. ಆದರೆ, ಅವನ ಪ್ರೇಮ ವಾಸವದತ್ತೆ ಮತ್ತು ಸಾಗರಿಕೆ ಇಬ್ಬರಲ್ಲೂ ಸಮವಾಗಿದ್ದಿತೇ ಎಂಬುದು

ಸರಿಯಾದ ಪ್ರಶ್ನೆ. ಅನೇಕರಲ್ಲಿ ಸಮವಾಗಿ ಪ್ರೇಮವಿಡುವುದೆಂಬುದು ಯಾರಿಗಾದರೂ ಅಸಾಧ್ಯವೇಸರಿ. ವತ್ಸರಾಜನ ಪ್ರೇಮ ಮೊದಲು ವಾಸವದತ್ತೆಯಲ್ಲಿ ಸಂಪೂರ್ಣವಾಗಿದ್ದು ಸಾಗರಿಕೆಯನ್ನು ಕಂಡ ಮೇಲೆ ವಿಭಕ್ತವಾಗಿ ಸಾಗರಿಕೆಯ ಪಾಲಿಗೇ ಸ್ವಲ್ಪ ಹೆಚ್ಚಾಗಿ ಬರುತ್ತದೆ. ಆದ್ದರಿಂದಲೇ ವತ್ಸರಾಜನು ಸಾಗರಿಕೆಗಾಗಿ, ಅವಳೊಡನೆ ಸಂಗಮಕ್ಕಾಗಿ,---ಹಂಬಲಿಸುತ್ತಿರುವಾಗಲೂ ವಾಸವದತ್ತೆಯ ಪ್ರಸನ್ನತೆಗಾಗಿ ಕಾತುರನಾಗಿಯೇ ಇದ್ದಾನೆ. ತನ್ನ ಹೊಸಪ್ರೇಮವನ್ನು ವಾಸವದತ್ತೆಗೆ ತಿಳಿಸದೆ ಮರೆಮಾಚುವುದು ಆಕೆಯ ಮನಸ್ಸಿಗೆ ಖೇದವುಂಟುಮಾಡಬಾರದೆಂಬ ಉದ್ದೇಶದಿಂದ. ಇದಕ್ಕಾಗಿ ಅವನು ಅವಳೊಡನೆ ಒಂದೆರಡು ಸುಳ್ಳುಮಾತನ್ನು ಆಡಲೂ ಹಿಂದೆಗೆಯುವುದಿಲ್ಲ. ಇಂತಹ ಪ್ರೇಮ ಶುದ್ಧವಾದ ಪ್ರೇಮವೇ ಎಂದು ಕೇಳಬಹುದು. ವತ್ಸರಾಜನ ಪ್ರೇಮ ಆದರ್ಶ ಪ್ರೇಮವಲ್ಲವೆಂದು ಮೊದಲೇ ಹೇಳಿದ್ದೇವೆ. ಆದರ್ಶದೃಷ್ಟಿಯಿಲ್ಲದಿರುವಾಗ, ಶುದ್ಧ ಅಥವಾ ಅಶುದ್ಧದ ಪ್ರಶ್ನೆಯೂ ಏಳುವುದಿಲ್ಲ. ಅವನ ಪ್ರೇಮ ವಾಸವದತ್ತೆ ಮತ್ತು ಸಾಗರಿಕೆ ಇಬ್ಬರಲ್ಲೂ ಸ್ಥಿರವಾಗಿ ನಿಲ್ಲುವಂತಹುದು; ಕ್ಷಣಿಕ ಅಥವಾ ತಾತ್ಕಾಲಿಕವಲ್ಲ. ಶಾಶ್ವತವಾದ ದಾಂಪತ್ಯದಲ್ಲಿ ರೂಪಿತವಾಗುವ ಅಂತಃಕರಣ ಪೂರ್ವಕವಾದ ಪ್ರೇಮ ಅದು.

ವತ್ಸರಾಜ ತುಂಬಾ ದಾಕ್ಷಿಣ್ಯದ ಪ್ರಕೃತಿಯವನು. ಅವನು ಇನ್ನೊಬ್ಬರ ಮನಸ್ಸನ್ನು ನೋಯಿಸುವಂತಹ ಮಾತನ್ನೆಂದಿಗೂ ಆಡುವವನಲ್ಲ. ಮುಖವನ್ನು ಗಂಟಿಕ್ಕಿ ಮಾತಾಡುವುದಂತೂ ಅವನಿಗೆ ತಿಳಿಯದ ವಿಷಯ. ಅರಮನೆಯ ಚೇಟಿಯರ ಬಗ್ಗೆ ಕೂಡ ತುಂಬ ದಯೆಯಿಂದ ವರ್ತಿಸುವುದು ಅವನ ಸಹಜಗುಣ. ಯೌಗಂಧರಾಯಣನಿಂದ ಪರಾಜಿತನಾದ ಕೋಸಲರಾಜನ ಶೌರ್ಯದ ವರ್ಣನೆಯನ್ನು ಕೇಳಿ, ಅವನನ್ನು ಬಾಯಿತುಂಬಾ ಹೊಗಳಿ ತನ್ನ ಮನಸ್ಸಿನ ವೈಶಾಲ್ಯವನ್ನೂ (IV[9]) ಸ್ವಭಾವತಃ ಶೂರನಾದವನ ಕರ್ತವ್ಯವನ್ನೂ ತೋರಿಸುತ್ತಾನೆ. ಅಂತಃಪುರದ ಬೆಂಕಿಯುರಿಯಲ್ಲಿ ವಿಪತ್ತಿಗೀಡಾಗಿದ್ದ ಸಾಗರಿಕೆಯನ್ನು ರಕ್ಷಿಸಲು ಜೀವದ ಹಂಗು ತೊರೆದು ಮುಂದೆ ನುಗ್ಗುವುದು ಅವನು ಆದರ್ಶವೀರಪುರುಷನೆಂಬುದನ್ನೂ ಸಾಗರಿಕೆಯಲ್ಲಿ ಅವನಿಗಿದ್ದ ಅಂತರಂಗಪ್ರೇಮವನ್ನೂ ಸೂಚಿಸುತ್ತದೆ.

ಉಲ್ಲಾಸಮನೋವೃತ್ತಿ, ಹಸನ್ಮುಖ, ದಾಕ್ಷಿಣ್ಯ ಭಾವ ಮುಂತಾದ ಉದಾತ್ತ ಗುಣಗಳು ವತ್ಸರಾಜನಲ್ಲಿ ಎಷ್ಟೋ ಇವೆ. ಆದರೆ ಯಾವಳೋ ಒಬ್ಬ ಅಪರಿಚಿತಳಾದ ಹೆಂಗಸಿನ ರಹಸ್ಯಪ್ರೇಮಾಲಾಪಗಳನ್ನು ಕೇಳುವ ಕುತೂಹಲದಿಂದ ನಾರಿಕೆ ಹಕ್ಕಿಯ ಹಿಂದೆ ಹಿಂದೆ ಹೋಗುವುದು ಮಾತ್ರ ಅವನ ಘನತೆಗೆ ಸಲ್ಲದು.

## ವಾಸವದತ್ತೆ

ಉದಯನನ ಪಟ್ಟಮಹಿಷಿ ವಾಸವದತ್ತೆ ಪತಿಪ್ರೇಮದಿಂದ ಕೂಡಿದ ಆದರ್ಶ ಹಿಂದೂಮಹಿಳೆ. ಮದನಮಹೋತ್ಸವದಲ್ಲಿ ಅಶೋಕವೃಕ್ಷದ ಕೆಳಗೆ ಮದನ ದೇವನ ಪೂಜೆಮಾಡಿದಮೇಲೆ ಪತಿದೇವನ ಪೂಜೆಯನ್ನು ಭಕ್ತಿಶ್ರದ್ಧೆಗಳಿಂದ ಮಾಡುತ್ತಾಳೆ. ಗಂಡನೊಡನೆ ಚೆನ್ನಾಗಿ ಪಳಗಿದ್ದು ಆತನ ಲೋಪದೋಷ ಗಳನ್ನೂ ಮನೋದೌರ್ಬಲ್ಯವನ್ನೂ ಚೆನ್ನಾಗಿ ಅರಿತಿರುವುದರಿಂದಲೇ ಅಂತಃ ಪುರದಲ್ಲೇ ತನ್ನ ಬಳಿ ಇರುವ ನಾಗರಿಕೆ—ಹೊಸಯೌವನ ಸೌಂದರ್ಯಗಳಿಂದ ಮೋಹಕಳಾದ ಸಾಗರಿಕೆ—ಅವನ ಕಣ್ಣಿಗೆ ಬೀಳದಂತೆ ಜಾಗರೂಕಳಾಗಿರು ತ್ತಾಳೆ. ಆದರೂ ಅವರಿಬ್ಬರೂ ಹೇಗೋ ಪರಸ್ಪರ ಭೇಟಿಯಾಗಿ ಪ್ರೇಮಬಂಧಿತ ರಾದುದನ್ನು ಕಣ್ಣಾರೆ ಕಂಡಾಗ, ಅನುರಾಗಿಣಿಯಾದ ಹೆಂಗಸಿಗೆ ತಕ್ಕಂತೆ, ಅವಳು ಗಂಡನ ಮೇಲೂ ಕೋಪಿಸಿಕೊಳ್ಳುತ್ತಾಳೆ.

ರಾಜನ ಪಟ್ಟಮಹಿಷಿಯೂ (ಅಲ್ಲಿಯವರೆಗೆ ಏಕಮಾತ್ರ ಮಹಿಷಿ) ಪತಿಯ ಪ್ರೇಮಕ್ಕೆ ಏಕಮಾತ್ರ ಪಾತ್ರಳೂ ಆಗಿದ್ದ ವಾಸವದತ್ತೆ, ಗಂಡನ ಬಳಿಯೂ ಆತ್ಮಾಭಿಮಾನದಿಂದ ಕೂಡಿದ ದರ್ಪದಿಂದ ವರ್ತಿಸುತ್ತಿದ್ದವಳು, ಸಕಾರಣವಾಗಿ ಗಂಡನ ಮೇಲೆ ಕೋಪಿಸಿಕೊಳ್ಳುವುದರಲ್ಲಿ ಆಶ್ಚರ್ಯವಿಲ್ಲ. ತನಗೇ ಮೀಸಲಾಗಿದ್ದ ತನ್ನ ಗಂಡನ ಪ್ರೇಮವು ಬೇರೊಬ್ಬಳಕಡೆ ಹರಿದು ಹೋಗುತ್ತಿರುವುದನ್ನು ಕಂಡಾಗ ಎಂತಹ ಹೆಂಗಸಿಗಾದರೂ ಉದ್ರೇಕವಾಗುವುದು ಸಹಜ. ವಾಸವದತ್ತೆ ಮೊದಲೆರಡುಬಾರಿ (II 181, III 81) ಗಂಡನ ಮೇಲೆ ಕೋಪಿಸಿಕೊಳ್ಳುವುದನ್ನೂ ನಾವು ಈ ಕೋಣದಿಂದ ನೋಡಬೇಕು. ಅವಳ ಕೋಪ ಕ್ಷಣಿಕ. ಗಂಡನ ಮೇಲೆ ಕೋಪಿಸಿಕೊಂಡು ಅವನ ಮಾತೊಂದಕ್ಕೂ ಕಿವಿಗೊಡದೆ ಬಂದು ಬಿಟ್ಟವಳು ಕೆಲವೇ ನಿಮಿಷಗಳಲ್ಲಿ ಪ್ರಸನ್ನಳಾಗಿ, (III 120) 'ಹಾಗೆ ಕಾಲಿಗೆ ಬಿದ್ದ ಆರ್ಯ ಪುತ್ರನನ್ನು ಅಲಕ್ಷಿಸಿ ಬಂದು ನಾನು ತುಂಬಾ ನಿಷ್ಠುರವಾದ ಕೆಲಸಮಾಡಿಬಿಟ್ಟೆ. ಆದ್ದರಿಂದ ಈಗ ನಾನೇ ಹೋಗಿ ಆರ್ಯಪುತ್ರನನ್ನು ಸಂತೈಸುತ್ತೇನೆ' ಎಂದು ಹೇಳಿಕೊಂಡು ಪುನಃ ಗಂಡನಲ್ಲಿಗೇ ಹೋಗುತ್ತಾಳೆ. ಈ ಮಾತುಕೇಳಿ ಕಾಂಚನ ಮಾಲೆ ಹೇಳುವುದನ್ನು ಕೇಳಿ—'ಮಹಾರಾಣಿಯವರನ್ನು ಬಿಟ್ಟು ಬೇರೆ ಯಾರು ಹೀಗೆ ಹೇಳಬಲ್ಲರು ? ಒಳ್ಳೆಯದು; ಮಹಾರಾಜರೇ ದುರ್ಜನರಾಗಲಿ, ಮಹಾ ರಾಣಿಯವರು ಮಾತ್ರ ಹಾಗಾಗುವುದು ಬೇಡ.' ವಾಸವದತ್ತೆಯದು ಎಂತಹ ಸೌಜನ್ಯ ! ಅಂತಹ ಉದಾತ್ತ ಮನೋಭಾವ !

ತನ್ನ ಗಂಡನು ಸಾಗರಿಕೆಯೊಡನೆ ಪ್ರೇಮಾಲಾಪ ಮಾಡುತ್ತಿರುವುದನ್ನು ಕಣ್ಣಾರೆ ಕಂಡಮೇಲಂತೂ (iii 135) ಅವಳ ಕೋಪ ರಾಜನ ಹೊಸಪ್ರೇಮಕ್ಕೆ ಸಹಾಯಕನಾಗಿದ್ದ ವಿದೂಷಕನ ಮೇಲೂ ರಾಜನ ಪ್ರೇಯಸಿ ಸಾಗರಿಕೆಯ ಮೇಲೂ ತಿರುಗಿ, ಪ್ರತಿಕ್ರಿಯಾ ಬುದ್ಧಿಯಿಂದ ಅವರಿಬ್ಬರನ್ನೂ ಬಂಧಿಸಿ ಕರೆದು ಕೊಂಡು ಹೋಗುತ್ತಾಳೆ. ಈಗಲೂ ಕೂಡ ತನ್ನ ಈ ವ್ಯಾಪಾರ ರಾಜನಿಗೆ ದುಃಖ ವುಂಟುಮಾಡುತ್ತೆಂದು ಭಾವಿಸಿ ಅವರಿಬ್ಬರನ್ನೂ ಸುಸಂಗತೆಯನ್ನೂ ಸ್ವಲ್ಪಹೊತ್ತಿ ನಲ್ಲೇ ಬಿಡುಗಡೆ ಮಾಡಿ, ಸಾಗರಿಕೆಯನ್ನು ಮಾತ್ರ ಉಜ್ಜಯಿನಿಗೆ ಕಳುಹಿಸಿ ಬಿಟ್ಟದಾಗಿ ಪ್ರವಾದಹುಟ್ಟಿಸಿ ಗೋಪ್ಯವಾಗಿ ಅಂತಃಪುರದಲ್ಲೇ ಬಂಧಿಸಿಡುತ್ತಾಳೆ.

ವಾಸವದತ್ತೆ ತುಂಬಾ ಉದಾರ ಮನಸ್ಸಿನವಳು. ತನ್ನ ಚೇಟಿಯರ ವಿಷಯ ದಲ್ಲೂ ಅವಳು ತೋರುತ್ತಿದ್ದ ದಯೆ ಅವರ್ಣನೀಯ. ಎಲ್ಲರನ್ನೂ ನಂಬುವ ಸ್ವಭಾವ ಅವಳದು. ಸುಸಂಗತೆ ತನ್ನನ್ನು ವಂಚಿಸಲಾರಳೆಂದೇ ಅವಳ ಭಾವನೆ. ಆದ್ದರಿಂದಲೇ ಅವಳಿಗೆ ತನ್ನ ಉಡುಪನ್ನೇ ಪಾರಿತೋಷಿಕವಾಗಿ ಕೊಟ್ಟದ್ದು. ಅಂತಹ 'ಪರಿಜನವತ್ಸಲೆ' ವಾಸವದತ್ತೆ. ಅಂತಃಪುರದಲ್ಲಿ ಬೆಂಕಿಕಾಣಿಸಿಕೊಂ ಡಾಗಲೂ ಆವಳು ಅಲ್ಲಿ ಬಂಧಿತಳಾಗಿದ್ದ ಸಾಗರಿಕೆ ವಿಪತ್ತಿಗೀಡಾಗುವಳಲ್ಲಾ ಎಂದು ಪರಿತಪಿಸತೊಡಗಿ, ಆವಳ ವಿಮೋಚನೆಗಾಗಿ ಮಹಾರಾಜನಲ್ಲಿ ಮೊರೆ ಯಿಡುತ್ತಾಳೆ. ಕ್ಷಣಮಾತ್ರದಲ್ಲಿ ಅವಳ ಅಸೂಯೆಯೆಲ್ಲಾ ಮಾಯವಾಗಿ, ಆ ಜಾಗವನ್ನು ಸರ್ವಸಾಧಾರಣವಾದ ಭೂತದಯೆ ಆಕ್ರಮಿಸಿಕೊಳ್ಳುತ್ತದೆ.

ವಾಸವದತ್ತೆಯ ಸ್ವದೇಶಪ್ರೇಮ ಸ್ವಜನಪ್ರೇಮ ಗಮನಾರ್ಹವಾದುದು. ಇಂದ್ರಜಾಲಿಕ ತನ್ನ ತೌರೂರಾದ ಉಜ್ಜಯಿನಿಯವನೆಂದು ಆವನಲ್ಲಿ ಅವಳಿಗೆ ವಿಶೇಷ ಪಕ್ಷಪಾತ. ಹಾಗೆಯೇ ಸೋದರಮಾವನ ಮಂತ್ರಿ ವಸುಭೂತಿ ಬಂದಿರು ವನೆಂದು ಕೇಳಿ ಇಂದ್ರಜಾಲಪ್ರದರ್ಶನವನ್ನೇ ನಿಲ್ಲಿಸಿಬಿಟ್ಟು ಅವನನ್ನು ನೋಡ ಬಯಸುತ್ತಾಳೆ. ತಾವು ಸಿಂಹಳದಿಂದ ಬರುತ್ತಿರುವಾಗ ಸಮುದ್ರಮಧ್ಯೆ ಹಡಗು ಒಡೆದು ರತ್ನಾವಳಿ ಪತ್ತೆಯಿಲ್ಲವಾದಳೆಂಬ ವಸುಭೂತಿಯ ಮಾತನ್ನು ಕೇಳಿ ವಾಸವದತ್ತೆಯ ಮನಸ್ಸು ತುಂಬಾ ದುಃಖಿತವಾಗುತ್ತದೆ. ಮುಂದೆ ಸಾಗರಿಕೆಯೇ ತನ್ನ ಸೋದರಮಾವನ ಮಗಳೂ ಸಿಂಹಳ ರಾಜಪುತ್ರಿಯೂ ಆದ ರತ್ನಾವಳಿ ಯೆಂಬುದು ತಿಳಿದಮೇಲೆ, ವಾಸವದತ್ತೆ ನಾಗರಿಕೆಯ ಮುಂದೆ ಬಂದು ತನ್ನ ಹಿಂದಿನ ನಿಷ್ಠುರ ವರ್ತನೆಗಾಗಿ ಅವಳ ಕ್ಷಮೆ ಬೇಡುತ್ತಾಳೆ. ಅಷ್ಟೇಅಲ್ಲ, ತನ್ನ ಗಂಡನಲ್ಲೇ ಅವಳ ಪ್ರೇಮವೂ ಬೇರೂರಿದೆಯೆಂಬುದನ್ನು ಚೆನ್ನಾಗಿ ಮನಗಂಡಿ

ರುವುದರಿಂದಲೂ, ತನ್ನ ಗಂಡನೂ ಅವಳಲ್ಲಿ ಅನುರಕ್ತನಾಗಿರುವುದನ್ನು ಪ್ರತ್ಯಕ್ಷವಾಗಿಯೇ ಕಂಡಿರುವುದರಿಂದಲೂ, ಅವಳನ್ನು ಮದುವೆಯಾದವನು ಸಾರ್ವಭೌಮನಾಗುವನೆಂಬ ಸಿದ್ಧಾದೇಶದಮೇಲೆ ಈ ವಿವಾಹಕ್ಕಾಗಿ ಸ್ವಾಮಿಭಕ್ತ ಯೌಗಂಧರಾಯಣ ಬದ್ಧಕಂಕಣನಾಗಿರುವುದರಿಂದಲೂ, ವಾಸವದತ್ತೆ ಕೇವಲ ನಿಃಸ್ವಾರ್ಥ ದೃಷ್ಟಿಯಿಂದ, ರತ್ನಾವಳಿಯ ಕೈಯನ್ನು ತಂದು ತನ್ನ ಗಂಡನ ಕೈಯಲ್ಲಿಟ್ಟು, 'ಈಕೆಯ ತೌರೂರು ತುಂಬಾ ದೂರದಲ್ಲಿದೆ. ಆದ್ದರಿಂದ ಈಕೆ ತನ್ನ ತೌರುಮನೆಯವರಿಗಾಗಿ ಹಂಬಲಿಸದಂತೆ ಈಕೆಯಲ್ಲಿ ವರ್ತಿಸು' ಎಂದು ಹೇಳಿ, ಸಂತೋಷದಿಂದ, ರತ್ನಾವಳಿಯನ್ನು ತನಗೆ ಸೌತಿಯನ್ನಾಗಿ ಸ್ವೀಕರಿಸುತ್ತಾಳೆ. ಹೆಂಗುಸಿನಲ್ಲಿ ಇದಕ್ಕಿಂತ ಹೆಚ್ಚಿನ ಔದಾರ್ಯವುಂಟೇ?

## ರತ್ನಾವಳೀ (ಸಾಗರಿಕೆ)

ರತ್ನಾವಳಿ ಈ ನಾಟಕದ ನಾಯಿಕೆ. ಮೊದಲಿನಿಂದ ಪ್ರಾಯಃ ಕೊನೆಯವರೆಗೂ ಅವಳು ಸಾಗರಿಕೆ ಎಂಬ ಹೆಸರಿನಿಂದಲೇ ವ್ಯವಹೃತಳಾಗಿದ್ದಾಳೆ. ಸಾಗರಿಕೆ ತುಂಬುಯೌವನದ ಚೆಲುವೆ; ಅವಿವಾಹಿತೆ. ಚಿತ್ರಫಲಕದಲ್ಲಿ ಚಿತ್ರಿತವಾಗಿರುವ ಅವಳ ರೂಪವೇ ವತ್ಸರಾಜನನ್ನೂ ಪರವಶನನ್ನಾಗಿ ಮಾಡಿಬಿಟ್ಟಿತೆಂದರೆ ಅವಳ ರೂಪ, ಲಾವಣ್ಯ ಎಷ್ಟು ಹೆಚ್ಚಿನವೆಂಬ ಊಹೆಯಾಗಬಹುದು.

ಸಾಗರಿಕೆ ಇನ್ನೂ ಮುಗ್ಧಾವಸ್ಥೆಯನ್ನು ದಾಟಿಬಂದವಳಲ್ಲ. ಅಶೋಕವೃಕ್ಷದ ತಳದಲ್ಲಿ ಮಹಾರಾಣಿಯಿಂದ ಪೂಜಿತನಾಗುತ್ತಿದ್ದ ರಾಜನನ್ನು ಅದೇ ಮೊದಲಾಗಿ ನೋಡಿದಾಗ ಸಾಗರಿಕೆ ಅವನನ್ನು ಪ್ರತ್ಯಕ್ಷನಾಗಿ ಬಂದ ಕಾಮದೇವನೆಂದೇ ತಿಳಿಯುತ್ತಾಳೆ. ಮುಂದೆ ವಂದಿಗಳ ಗಾನವನ್ನು ಕೇಳಿ, ಆತನೇ ವತ್ಸರಾಜ, ತನ್ನ ತಂದೆ ತನಗೆ ನಿಶ್ಚಯಿಸಿರುವ ವರ, ಎಂದರಿತಮೇಲೆ, ಅವನಲ್ಲಿ ತನ್ನ ಸಂಪೂರ್ಣ ಪ್ರೇಮವಿಡುತ್ತಾಳೆ. 'ಅಂತಹ ಕನ್ಯಾರತ್ನ ಅಂತಹ ರಾಜನನ್ನಲ್ಲದೆ ಬೇರಾರನ್ನು ಪ್ರೇಮಿಸುವಳು?' ಎಂಬ ಸುಸಂಗತೆಯ ಮಾತು ನಮ್ಮ ಮನಸ್ಸಿಗೂ ಒಪ್ಪಿಗೆಯಾಗತಕ್ಕದ್ದೇ. ಸಾಗರಿಕೆ ತನ್ನ ಪ್ರಕೃತಸ್ಥಿತಿಯನ್ನು ಮನಗಂಡು ರಾಜನನ್ನು ಪತಿಯನ್ನಾಗಿ ಪಡೆಯುವುದಸಾಧ್ಯವೆಂದೇ ಭಾವಿಸಿದ್ದರೂ, ಸುಸಂಗತೆಯ ಪ್ರೋತ್ಸಾಹ ಆಕೆಯಲ್ಲಿ ಸ್ವಲ್ಪಮಟ್ಟಿನ ಆಸೆಯನ್ನು ಹುಟ್ಟಿಸುತ್ತದೆ. ಸುಸಂಗತೆಯೇ ಮುಂದೆ ರಾಜನನ್ನು ಅವಳಲ್ಲಿಗೆ ಕರೆತಂದು ಅವಳ ಕೈಹಿಡಿದು ಮಾತಾಡಿಸುವಂತೆ ಮಾಡುತ್ತಾಳೆ.

ರಾಜಪುತ್ರಿಯಾಗಿ ಹುಟ್ಟಿ ಬೆಳೆದಿದ್ದ ಸಾಗರಿಕೆ ಚೇಟಿಯಂತೆ ವಾಸವದತ್ತೆಯ ಬಳಿ ಇರುತ್ತಿದ್ದಾಗ ಎಷ್ಟರಮಟ್ಟಿಗೆ ಮನಃಕ್ಲೇಶವನ್ನನುಭವಿಸುತ್ತಿದ್ದಿರಬೇಕೆಂಬುದನ್ನು ಯಾರಾದರೂ ಊಹಿಸಬಹುದು. ರಾಜನನ್ನು ಕಂಡು ಪ್ರೀತಿಸಿ ಆತನ ಪ್ರೇಮ ಪಡೆಯುವುದು ಸಾಧ್ಯವಾಗಬಹುದೆಂದೇ ಸಕಾರಣವಾಗಿ ಭಾವಿಸಿ, ಆಸೆಯಿಂದಿರುತ್ತಾಳೆ. ಆದರೆ ತನ್ಮಧ್ಯೆ ರಾಜನನ್ನು ತಾನು ಪ್ರೀತಿಸುವುದು ಮಹಾರಾಣಿಗೆ ತಿಳಿದು ಬಿಟ್ಟಿತೆಂದು ಅರಿತು, ರಾಜನೊಡನೆ ಪುನಃ ಸಮಾಗಮ ಹೊಂದುವುದರಲ್ಲಿ ಸಂಪೂರ್ಣ ನಿರಾಶಳಾಗಿ, ಮಹಾರಾಣಿಯಿಂದ ಪರಿಭವಕ್ಕೀಡಾಗುವುದಕ್ಕಿಂತ ಸಾಯುವುದು ಲೇಸು, ಎಂದು ನೇಣು ಹಾಕಿಕೊಳ್ಳಲು ಉದ್ಯುಕ್ತಳಾಗುತ್ತಾಳೆ. ಅಂತಹ ಸಮಯದಲ್ಲೂ ಅನಿರೀಕ್ಷಿತವಾಗಿ ರಾಜನೇ ತನ್ನ ಮುಂದೆ ಬರಲು 'ಈತನನ್ನು ಕಂಡಮೇಲೆ ಪುನಃ ನನಗೆ ಜೀವಿಸಬೇಕೆಂಬ ಅಭಿಲಾಷೆ ನಿಜವಾಗಿಯೂ ಉಂಟಾಗಿದೆ' ಎಂದು ಕೊಳ್ಳುತ್ತಾಳೆ. ರಾಜನಲ್ಲಿ ಆಕೆಯ ಪ್ರೀತಿ ಅಷ್ಟರ ಮಟ್ಟಿಗೆ ಬೇರೂರಿತ್ತು.

ಹಿಂದೆಯೇ ಹೇಳಿರುವಂತೆ ಸಾಗರಿಕೆ ಇನ್ನೂ ಮುಗ್ಧೆ: ತುಂಬಾ ಲಜ್ಜಾಶೀಲೆ. ಯಾವನನ್ನು ಪ್ರಾಣಕ್ಕಿಂತ ಹೆಚ್ಚಾಗಿ ಅವಳು ಪ್ರೀತಿಸುತ್ತಿದ್ದಾಳೋ, ಅವನೇ ಮುಂದೆ ಬಂದು ಅವಳನ್ನು ಮಾತಾಡಿಸುತ್ತಿದ್ದರೂ, ಅವನೊಡನೆ ಮಾತಾಡಲು ಧೈರ್ಯಪಡುತ್ತಾಳೆ. ಅವನೆದುರಿಗೆ ನಿಲ್ಲಲೂ ಸಾಧ್ಯವಿಲ್ಲದೆ ನಡುಗುತ್ತಾಳೆ. ಅವನೇ ಅವಳ ಕೈಹಿಡಿದು ಆಲಿಂಗನಾಭಿಲಾಷಿಯಾಗಿ ಬಂದರೂ, ಅವನಿಂದ ಕೈಬಿಡಿಸಿಕೊಂಡು ಹೊರಟು ಹೋಗುವುದಕ್ಕೇ ಯತ್ನಿಸುತ್ತಾಳೆ.

ಚಿತ್ರ ಬರೆಯುವುದರಲ್ಲಿ ಸಾಗರಿಕೆ ಬಹಳ ನಿಪುಣೆ. ರಾಜ, ವಿದೂಷಕ, ರಾಣಿ, ಕಾಂಚನಮಾಲೆ ಎಲ್ಲರೂ ಅವಳು ಬರೆದ ರಾಜನ ಚಿತ್ರವನ್ನು ಕಂಡು ಬೆರಗಾಗುತ್ತಾರೆ. ಅವಳ ಕವಿತಾಶಕ್ತಿ (II.22) ಮತ್ತು ಅವಳಾಡುವ ಮಾತುಗಳು ಅವಳು ಸುಶಿಕ್ಷಿತಳಾಗಿದ್ದ ಕಲಾಕುಶಲೆಯೆಂಬುದನ್ನು ಸ್ಪಷ್ಟಪಡಿಸುತ್ತವೆ.

ಸಾಗರಿಕೆ ಸೂಕ್ಷ್ಮಮನಸ್ಸಿನವಳು. ತನ್ನ ಪ್ರಣಯವೃತ್ತಾಂತ ಮಹಾರಾಣಿಗೆ ಅರಿವಾಗಿ ಬಿಟ್ಟಿದೆಯೆಂಬುದು ತಿಳಿದ ಮೇಲೆ 'ಪರಿಭವಪಡುವುದಕ್ಕಿಂತ ಸಾಯುವುದೇ ಲೇಸು' ಎಂದು ಸಾಯಲು ಉದ್ಯುಕ್ತಳಾಗುತ್ತಾಳೆ. ವಾಸವದತ್ತೆಯ ಬಳಿ ಚೇಟಿಯಾಗಿರಬೇಕಾಗಿ ಬಂದ ಮೇಲೆ ತನ್ನ ನಿಜಸ್ಥಿತಿಯನ್ನು ತನ್ನ ಆಪ್ತತಮಳಾದ ಸುಸಂಗತೆಗೂ ಅವಳು ತಿಳಿಸುವುದಿಲ್ಲ. ರತ್ನಮಾಲೆಯನ್ನು ಸುಸಂಗತೆಯ

ವಶಕ್ಕೆ ಕೊಟ್ಟಾಗ, ಅದನ್ನು ಕಂಡು ಬೆರಗಾಗಿ 'ಇದು ನಿನಗೆಲ್ಲಿಂದ ಬಂತು ?' ಎಂದು ಸುಸಂಗತೆ ಕೇಳಲು, ಸುಮ್ಮನೆ ನಿಟ್ಟುಸಿರು ಬಿಟ್ಟು—'ಅದೆಲ್ಲಾ ಈಗೇತಕ್ಕೆ ?' ಎಂದು ಹೇಳಿ ಮುಗಿಸಿ ಬಿಡುತ್ತಾಳೆ. ತನ್ನ ಮನೆತನದ ಗೌರವವನ್ನು ತನ್ನ ಆಗಿನ ಸ್ಥಿತಿ ಕಲುಷಿತ ಮಾಡಿಬಿಡುವುದೆಂದೂ, ಆದ್ದರಿಂದ ತನ್ನ ನಿಜ ಸ್ಥಿತಿಯನ್ನು ಪ್ರಕಟಿಸಕೂಡದೆಂದೂ, ಸಾಗರಿಕೆ ಕೊನೆಯವರೆಗೂ ಒಂದೇ ನಿಶ್ಚಯದಿಂದ ಇದ್ದುದು ಅವಳ ಮನೋದಾರ್ಢ್ಯವನ್ನು ತೋರಿಸುತ್ತದೆ. ತುಂಬಾ ಬೆಲೆಬಾಳುವ ತನ್ನ ರತ್ನಮಾಲೆಯನ್ನು 'ಯಾರಾದರೂ ಬ್ರಾಹ್ಮಣನಿಗೆ ದಾನ ಮಾಡಿಬಿಡು' ಎಂದು ಸುಸಂಗತೆಯ ವಶಕ್ಕೆ ಕೊಡಬೇಕಾದರೆ ಸಾಗರಿಕೆಯ ಔದಾರ್ಯ ಎಂತಹುದಾಗಿರಬೇಕು !

ಅಂತಃಪುರದ ಅಗ್ನಿಯಿಂದ ರಾಜನೇ ಸಾಗರಿಕೆಯನ್ನು ರಕ್ಷಿಸಿ ಆಸ್ಥಾನ ಮಂಟಪಕ್ಕೆ ಕರೆದುಕೊಂಡು ಹೋದಾಗ ಅಲ್ಲಿ ಅವನನ್ನು ಅಮಾತ್ಯವಸುಭೂತಿ ಗುರ್ತಿಸಲು ಅವಳು ತನ್ನ ಪ್ರಕೃತಸ್ಥಿತಿಯನ್ನು ಗಮನಿಸಿ ದುಃಖಿತಳಾಗಿ ಮೂರ್ಛೆಹೋಗುತ್ತಾಳೆಯೇ ವಿನಾ ಸಂತೋಷಿಸುವುದಿಲ್ಲ. ಮುಂದೆ ವಾಸವದತ್ತೆಯೇ, ಅವಳಿಗೆ ಆದರದ ಮಾತಾಡಿದರೂ, ತಲೆ ತಗ್ಗಿಸಿಕೊಂಡೇ 'ಅಪರಾಧಿನಿಯಾಗಿರುವ ನಾನು ಮಹಾರಾಣಿಯವರಿಗೆ ಹೇಗೆ ಮುಖ ತೋರಿಸಲಿ ?' ಎನ್ನುತ್ತಾಳೆ. ಅವಳ ವಿನಯ ಅಂತಹದು.

ಕೊನೆಯಲ್ಲಿ ವಾಸವದತ್ತೆಯೇ ಮುಂದಾಗಿ ನಿಂತು ತನ್ನ ಗಂಡನೊಡನೆ ಸಾಗರಿಕೆಯ ವಿವಾಹವನ್ನು ನಡೆಯಿಸಿದುದು ಸಾಗರಿಕೆಯ ಮನಸ್ಸಿಗೆ ಎಷ್ಟು ತೃಪ್ತಿಯುಂಟುಮಾಡಿರಬಹುದೋ ನಮಗೂ ಅಷ್ಟೇ ತೃಪ್ತಿಕರವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ.

## ಸುಸಂಗತೆ

ಸುಸಂಗತೆ ಸಾಗರಿಕೆಯ ಪರಮಾಪ್ತಸಖಿ. ಇವಳೂ ಸಾಗರಿಕೆಯಂತೆಯೇ ವಾಸವದತ್ತೆಯ ಬಳಿ ಇರುವ ಚೇಟಿ. ಪಾಪ, ಸಾಗರದಲ್ಲಿ ವಿಪತ್ತಿಗೀಡಾಗಿದ್ದವಳೆಂದೋ ಏನೋ, ಮೊದಲಿನಿಂದಲೂ ಸಾಗರಿಕೆಯ ಮೇಲೆ ಸುಸಂಗತೆಗೆ ಮಮತೆ, ಆದರ.

ಸುಸಂಗತೆಗೆ ಸಾಗರಿಕೆಯ ಮೇಲಿರುವ ಆದರ ಶುದ್ಧವಾದುದು, ನೈಜವಾದುದು. ಸಾಗರಿಕೆಯ ಪೂರ್ವೋತ್ತರಗಳೊಂದೂ ತಿಳಿಯದೆಯೇ ಇದ್ದರೂ, ಅವಳ ಸುಖದುಃಖಗಳಲ್ಲಿ ಅವಳಿಗೆ ಸದಾ ಒತ್ತಾಸೆಯಾಗಿರುವವಳು ಸುಸಂಗತೆ.

ನಾಗರಿಕೆಯಲ್ಲಿ ರಾಜನಿಗಾಗಿ ಅಂಕುರಿತವಾದ ಪ್ರೀತಿಯನ್ನು ನೀರೆರೆದು ಬೆಳೆಸುವವಳೂ ಸುಸಂಗತೆ. ಹೇಗಾದರೂ ರಾಜನೂ ನಾಗರಿಕೆಯನ್ನು ಪ್ರೀತಿಸುವಂತಾಗಿ ಅವಳನ್ನು ಅವನು ಮದುವೆಯಾಗಲೆಂಬುದೇ ಸುಸಂಗತೆಯ ಹಂಬಲ. ಅದಕ್ಕಾಗಿಯೇ ಅವಳು ಸಮಯ ಕಾಯುತ್ತಿದ್ದು ರಾಜನು ನಾಗರಿಕೆಯನ್ನು ಕದಳೀಗೃಹದ ಬಳಿ ಮೊದಲನೆಯಬಾರಿ ಸಂಧಿಸುವಂತೆ ಮಾಡುತ್ತಾಳೆ. ಅಷ್ಟೇ ಅಲ್ಲ; 'ಕೈ ಹಿಡಿದು ನಾಗರಿಕೆಯನ್ನು ಸಂತೈಸು' ಎಂದು ಅರ್ಥಗರ್ಭಿತವಾದ ಮಾತುಗಳನ್ನಾಡಿ ಅವನು ಇವಳ 'ಪಾಣಿಗ್ರಹಣ' ಮಾಡಬೇಕೆಂದು ಸೂಚಿಸುತ್ತಾಳೆ. ಮುಂದೆಯೂ ಮತ್ತೊಂದುಬಾರಿ ಮಾಧವೀಲತಾಮಂಟಪದಲ್ಲಿ ರಾಜನು ನಾಗರಿಕೆಯನ್ನು ಸಂಧಿಸಲು ತುಂಬಾ ಚಾತುರ್ಯದಿಂದ ಏರ್ಪಾಟುಮಾಡುತ್ತಾಳೆ. ಆದರೆ ಈ ಹಂಚಿಕೆ ಕಾರ್ಯಗತವಾಗುವುದಕ್ಕೆ ಮುಂಚೆಯೇ ವಾಸವದತ್ತೆಗೆ ಅವರ ಸೂಚನೆ ತಿಳಿದು ಸುಸಂಗತೆ ಅನಿರೀಕ್ಷಿತವಾಗಿ ಬಂಧಿತಳಾಗಿಬಿಡುತ್ತಾಳೆ.

ಸುಸಂಗತೆ ತುಂಬಾ ಚತುರೆ. ನಾಗರಿಕೆ ರಾಜನ ಚಿತ್ರವನ್ನೇ ಬರೆದಿದ್ದರೂ 'ಅನಂಗದೇವನದು' ಎಂದು ಹೇಳಿದ ಕೂಡಲೇ, 'ಹಾಗಾದರೆ ಸರಿ. ಇಲ್ಲಿ ಕೊಡು' ಎಂದು ಹೇಳಿ ಆ ಚಿತ್ರದ ಪಕ್ಕದಲ್ಲೇ ನಾಗರಿಕೆಯನ್ನು ಚಿತ್ರಿಸಿ, 'ಅನಂಗನ ಪಕ್ಕದಲ್ಲಿ ರತಿ' ಎಂದು ವ್ಯಂಗ್ಯವಾಗಿ ಹೇಳುತ್ತಾಳೆ. ರಾಜನ ಚಿತ್ರವನ್ನು ನಾಗರಿಕೆ ಬರೆದಿದ್ದುದನ್ನು ನೋಡಿದ ಕೂಡಲೇ ರಾಜನಲ್ಲಿ ನಾಗರಿಕೆ ಅನುರಕ್ತಳಾಗಿದ್ದಾಳೆಂಬುದು ಅವಳಿಗೆ ತಿಳಿದು ಹೋಗುತ್ತದೆ. ನಾಗರಿಕೆಯೂ ಇವಳಲ್ಲಿ ಮರೆ ಮಾಚುವುದರಲ್ಲಿ ಪ್ರಯೋಜನವಿಲ್ಲ, ಎಂದು ಮನಬಿಚ್ಚಿ ಎಲ್ಲವನ್ನೂ ಅವಳಿಗೆ ಬ್ಬಳಿಗೆ ಹೇಳಿಬಿಡುತ್ತಾಳೆ.

ಸುಸಂಗತೆ ಬಂಧಮುಕ್ತಳಾಗಿ ಬಂದ ಮೇಲೆ ನಾಗರಿಕೆ ಬಂಧಿತಳಾಗಿ ಬಿಡುತ್ತಾಳೆ. ಆಗ ಸುಸಂಗತೆಯ ದುಃಖ ಹೇಳತೀರದು. ನಾಗರಿಕೆ ಕೊಟ್ಟಿದ್ದ ರತ್ನಮಾಲೆಯನ್ನು ಅವಳ ಅಪೇಕ್ಷೆಯಂತೆ ಬ್ರಾಹ್ಮಣನಾದ ವಿದೂಷಕನಿಗೆ ಕೊಟ್ಟುಬಿಡುತ್ತಾಳೆ. ನಾಗರಿಕೆಯನ್ನು ಉಜ್ಜಯಿನಿಗೆ ಕಳಿಹಿಸಿರುವುದಾಗಿ ಪ್ರವಾದವನ್ನು ಹುಟ್ಟಿಸಿ ಮಹಾರಾಣಿಯು ಅವಳನ್ನು ಗುಟ್ಟಾಗಿ ಎಲ್ಲೋ ಬಂಧಿಸಿಟ್ಟಿದ್ದಾಳೆಂದು ವಿದೂಷಕನಿಗೆ ಅವಳು ಹೇಳುವುದು, ಹೇಗಾದರೂ ಮಾಡಿ ಮಹಾರಾಜನು ಅವಳ ಪತ್ತೆ ಹಚ್ಚಲಿ ಎಂಬ ಉದ್ದೇಶದಿಂದ. ನಾಗರಿಕೆಯೇ ಸಿಂಹಳ ರಾಜಪುತ್ರಿ ರತ್ನಾವಳಿಯೆಂಬುದು ಹೊರಬಿದ್ದಾಗಲೂ ಮಹಾರಾಜನೊಡನೆ ಅವಳ ವಿವಾಹ ನಡೆಯಿಸಲು ಮಹಾರಾಣಿಯೇ ಮುಂದೆ ಬಂದಾಗಲೂ ಮರೆಯಾಗಿಯೇ ಇರುವ ಸುಸಂಗತೆಯನ್ನು ಬೇರಾರೂ ಸಂತೋಷಪಡಿಸಲಾರರು

## ವಿದೂಷಕ (ವಸಂತಕ)

ಶೃಂಗಾರರಸಪ್ರಧಾನವಾದ ಸಂಸ್ಕೃತ ನಾಟಕಗಳಲ್ಲಿ ವಿದೂಷಕನ ಪಾತ್ರ ವಿದ್ದೇ ಇರುತ್ತೆ. ಆತ ನಾಯಕನಾದ ರಾಜನ ಜತೆಯಲ್ಲೇ ಇರುವ ಅವನ ಗೆಳೆಯ. ಅವನನ್ನು 'ನರ್ಮಸಚಿವ' ನೆಂದು ವ್ಯವಹರಿಸುವುದೂ ಉಂಟು. ಅದಕ್ಕೆ ತಕ್ಕಂತೆ ರಾಜನ ಪ್ರೇಮ ವ್ಯವಹಾರಗಳಲ್ಲಿ ಅವನಿಗೆ ತುಂಬಾ ಸಹಾಯಕನಾಗುವವನು ವಿದೂಷಕನೇ. ಇವನು ತನ್ನ ವೇಷ, ಭಾಷೆಗಳಿಂದ ನಾಟಕಗಳಲ್ಲಿ ಹಾಸ್ಯಮಯ ಸನ್ನಿವೇಶಗಳನ್ನು ಕಲ್ಪಿಸುವುದರಿಂದ, ವಿದೂಷಕನೆಂದರೆ ಸಾಮಾನ್ಯವಾಗಿ 'ಹಾಸ್ಯಗಾರ' ನೆಂದೇ ಭಾವನೆ ಬರುತ್ತೆ.

ಪ್ರಸಕ್ತ ನಾಟಕದ ವಿದೂಷಕ - ವಸಂತಕ ಎಂದು ಅವನ ಹೆಸರು— ಮೊದಲಿನಿಂದ ಕೊನೆಯವರೆಗೂ ರಾಜನ ಪಕ್ಕದಲ್ಲೇ ಇರುವವನು. ಮೊದಲನೆಯ ಅಂಕದ ಆದಿಯಲ್ಲೇ ಇವನು ರಾಜನೊಡನೆ ಮದನಮಹೋತ್ಸವದ ವಿಚಾರವಾಗಿ ಹೇಳುತ್ತಾ 'ಈ ಉತ್ಸವ ಕಾಮದೇವನದೂ ಅಲ್ಲ; ನಿನ್ನದೂ ಅಲ್ಲ; ನನ್ನದು!' ಎನ್ನುವಾಗ ಯಾರಿಗೇ ತಾನೇ ನಗುಬರುವುದಿಲ್ಲ! ಮುಂದೆ, ಅವನು ನರ್ತಿಸುತ್ತಿರುವ ಚೇಟಿಯರೊಡನೆ ತಾನೂ ನರ್ತಿಸಲು ಹೋಗುವಾಗಲೂ, ಅವರೊಡನೆ ಪೆಚ್ಚುಪೆಚ್ಚಾಗಿ ಮಾತಾಡುವಾಗಲೂ, ಅವರು ತಾವು ಗಾನಮಾಡುತ್ತಿದ್ದುದು ದ್ವಿಪದೀ **ಖಂಡ** ವೆಂದಾಗ 'ಸಕ್ಕರೆಯ ಗಟ್ಟಿ' ಎಂದು ಅರ್ಥಮಾಡಿಕೊಂಡು 'ಮಿಠಾಯಿ ಮಾಡುತ್ತಾರಲ್ಲಾ ಅದೇಯೋ?' ಎಂದು ಕೇಳುವಾಗಲೂ ಮತ್ತು ನಾರಿಕೆಯು ಉಚ್ಚರಿಸಿದ 'ದುರ್ಲಭಜನಾನುರಾಗೋ....' ಎಂಬ ಗಾಥಿಕೆಯನ್ನು ಕೇಳಿ ಅದನ್ನು ವೇದದ ಋಕ್ ಎನ್ನುವಾಗಲೂ ಹಾಸ್ಯಮಯ ಸನ್ನಿವೇಶಗಳೇರ್ಪಡುತ್ತವೆ.

ಈ ವಿದೂಷಕ ಯಾವಾಗಲೂ ಮುಂಜಾಗ್ರತೆಯಿಂದ ವರ್ತಿಸುವುದಿಲ್ಲ. ತನ್ನ ಕಂಕುಳಲ್ಲಿ ಮುಚ್ಚಿಟ್ಟು ಕೊಂಡಿದ್ದ ಚಿತ್ರಫಲಕವನ್ನು ವಾಸವದತ್ತೆಯ ಎದುರಿಗೇ ಅಜಾಗ್ರತೆಯಿಂದ ಬೀಳಿಸಿ, ರಾಜನನ್ನು ದುಃಸ್ಥಿತಿಗೀಡುಮಾಡುತ್ತಾನೆ. ಕದಳೀಗೃಹದ ಬಳಿ ರಾಜನು ಸಾಗರಿಕೆಯನ್ನು ಸಂಧಿಸಿ ಆನಂದಿತನಾಗಿರುವಾಗ 'ವಾಸವದತ್ತೆ'ಯ ಹೆಸರನ್ನು ಅರ್ಥವಿಲ್ಲದೆ ಉಚ್ಚರಿಸಿ ರಾಜನು ಗಾಬರಿಗೊಳ್ಳುವಂತೆಯೂ ಸಾಗರಿಕೆ ಅಲ್ಲಿಂದ ಹೊರಟು ಹೋಗುವಂತೆಯೂ ಮಾಡಿ ರಾಜನ ಆಗ್ರಹಕ್ಕೆ ಪಾತ್ರನಾಗುತ್ತಾನೆ. ಅನಾವಶ್ಯಕವಾಗಿ ಚಪ್ಪಾಳೆ ತಟ್ಟಿ, ಸಾಗರಿಕೆಯ ಪ್ರೇಮಾಲಾಪಗಳನ್ನು ಮರದ ಮೇಲಿಂದ ಉಚ್ಚರಿಸುತ್ತಿದ್ದ ಸಾರಿಕೆ ಅಲ್ಲಿಂದ ಹಾರಿಹೋಗುವಂತೆ ಮಾಡಿದುದೂ ರಾಜನಿಗೆ ಅಸಮಾಧಾನವುಂಟುಮಾಡುತ್ತೆ.

ಹೀಗೆ ಅನೇಕ ಸಮಯಗಳಲ್ಲಿ ವಸಂತಕನು ಮಾಡುವ ಕೆಲಸ, ಆಡುವಮಾತು ಅವನು ವಿವೇಕಿಯಲ್ಲವೆಂಬುದನ್ನು ದೃಢಪಡಿಸುತ್ತದೆ. ಆದರೆ ಇನ್ನು ಕೆಲವು ಸಮಯಗಳಲ್ಲಿ ಅವನು ತನ್ನ ಪ್ರತ್ಯುತ್ಪನ್ನಮತಿಯನ್ನು ಹೊರಗೆಡುವುತ್ತಾನೆ. 'ಚಿತ್ರಫಲಕದಲ್ಲಿ ಸಾಗರಿಕೆಯ ಪಕ್ಕದಲ್ಲಿ ರಾಜನ ಚಿತ್ರವನ್ನು ಬರೆದವರು ಯಾರು ?' ಎಂದು ವಾಸವದತ್ತೆ ಕೇಳಿದಾಗ ವಿದೂಷಕನ ಉತ್ತರ ನೋಡಿ (ii [173]), ಎಷ್ಟು ಬುದ್ಧಿವಂತಿಕೆಯಿಂದ ಕೂಡಿದೆ! ಮಾಧವೀಲತಾಮಂಟಪದಲ್ಲಿ ಸಾಗರಿಕೆ ರಾಜನನ್ನು ಸಂಧಿಸುವಂತೆ ಎಷ್ಟೋ ಚತುರತೆಯಿಂದ ಹಂಚಿಕೆಯೊಂದನ್ನೂ ವಿದೂಷಕನೇ ಸಿದ್ಧಪಡಿಸುತ್ತಾನೆ.

ಕೆಲವು ವೇಳೆ ಅವನಾಡುವ ಮಾತುಗಳು ಅರ್ಥಗರ್ಭಿತವಾಗಿಯೂ ಇವೆ. ವಾಸವದತ್ತೆ ಮುನಿಸಿಕೊಂಡು ಹೊರಟು ಹೋದಾಗ ಅವನು ರಾಜನೊಡನೆ ಹೇಳುವ ಮಾತು ( ಕ್ಷೇಮೇಣ ಅತಿಕ್ರಾಂತಾ ವಾಸವದತ್ತಾ ಅಕಾಲಬಾದಲಿಕಾ ಇವ)ಎಂದಿಗೂ ಮರೆತು ಹೋಗತಕ್ಕದ್ದಲ್ಲ. ಮದನೋತ್ಸವದಲ್ಲಿ ಜನರು ಆನಂದ ಮಗ್ನರಾಗಿದ್ದ ಬೇರೆಬೇರೆ ದೃಶ್ಯಗಳನ್ನು ಅವನು ವರ್ಣಿಸಿರುವ ರೀತಿಯೂ ತುಂಬಾ ಸೊಗಸಾಗಿದೆ. ಸುಸಂಗತೆ ಅವನಿಗೆ ಸಾಗರಿಕೆಯ ರತ್ನಮಾಲೆಯನ್ನು ದಾನವಾಗಿ ಕೊಟ್ಟಾಗ ಮೊದಲು ಅವನು ಅದನ್ನು ತೆಗೆದುಕೊಳ್ಳದೆ 'ಸಾಗರಿಕೆ ಇಂತಹ ದುರವಸ್ಥೆಗೀಡಾಗಿರುವಾಗ, ಇದನ್ನು ತೆಗೆದುಕೊಳ್ಳಲು ನನ್ನ ಕೈ ಮುಂದೆ ಬರುವುದಿಲ್ಲ' ಎಂದು ಹೇಳಿರುವುದು ಅವನ ಘನತೆಯನ್ನು ವ್ಯಕ್ತಪಡಿಸುತ್ತದೆ. ಐಂದ್ರಜಾಲಿಕನ ಮೂಲಕವಾದರೂ, ಅವಕಾಶಸಿಕ್ಕಿರುವಾಗಲೇ, ಸಾಗರಿಕೆಯ ಬಗ್ಗೆ ವಿವರಗಳನ್ನು ಪತ್ತೆಹಚ್ಚಬೇಕೆಂಬ ಉದ್ದೇಶದಿಂದಲೇ ಅವನು 'ಈ ಆಟಗಳಿಂದೇನು ? ಮಹಾರಾಜನನ್ನು ಸಂತೋಷಗೊಳಿಸಬೇಕಾದರೆ ಸಾಗರಿಕೆಯನ್ನು ತೋರಿಸು' ಎಂದು ಇಂದ್ರಜಾಲಿಕನಿಗೆ ಏಕಾಂತವಾಗಿ ಹೇಳಿ, ಸಮಯಸಿಕ್ಕಿದಾಗ ಕಾರ್ಯ ಸಾಧಿಸಿಕೊಳ್ಳಬೇಕೆಂಬ ತನ್ನ ಜಾಣತನವನ್ನು ತೋರಿಸುತ್ತಾನೆ. ಇದೇ ಜಾಣತನದಿಂದಲೇ ಅವನು ಮುಂದೆ ಕೊನೆಯದೃಶ್ಯದಲ್ಲಿ ರತ್ನಾವಳಿಯನ್ನು ರಾಜನಿಗೆ ಮಡದಿಯನ್ನಾಗಿ ಒಪ್ಪಿಸುವಂತೆ ವಾಸವದತ್ತೆಗೆ ಸಮಯವರಿತು ಸೂಚಿಸಿದಾಗ ಎಲ್ಲರ ಮೆಚ್ಚುಗೆಗೂ ಪಾತ್ರನಾಗುತ್ತಾನೆ. ತನ್ನ ಸೂಚನೆಯಂತೆಯೇ ವಾಸವದತ್ತೆ ರತ್ನಾವಳಿಯ ಕೈಯನ್ನು ರಾಜನ ಕೈಯಲ್ಲಿಟ್ಟು ಆ ಮೂಲಕ ಅವರ ಪರಸ್ಪರ ಪ್ರಣಯಕ್ಕೆ ತನ್ನ ಸಮ್ಮತಿಯನ್ನು ಕೊಟ್ಟಾಗ ವಿದೂಷಕನ ಆನಂದಕ್ಕೆ ಮಿತಿಯಿಲ್ಲದೆ ಕುಣಿದಾಡಲಾರಂಭಿಸುತ್ತಾನೆ. ರಾಜನ ಮೇಲೆ ಅವನಿಗಿದ್ದ ಮಮತೆ ಅಂತಹುದು.

# ಯೌಗಂಧರಾಯಣ

ಯೌಗಂಧರಾಯಣ ರಂಗಸ್ಥಲದ ಮೇಲೆ ಬರುವುದು ಎರಡೇ ಬಾರಿ–ನಾಟಕದ ಪ್ರಾರಂಭದಲ್ಲಿ ಮೊದಲನೆಯ ಸಲ, ನಾಟಕ ಮುಗಿಯುವಾಗ ಎರಡನೆಯ ಮತ್ತು ಕೊನೆಯ ಸಲ. ಎರಡು ಸಲವೂ ತೀರ ಸ್ವಲ್ಪ ಕಾಲ ಮಾತ್ರ ಅವನು ನಮ್ಮ ಮುಂದೆ ಕಾಣಿಸಿಕೊಳ್ಳುವನಾದರೂ, ಆ ಅತ್ಯಲ್ಪ ಕಾಲದಲ್ಲೇ ಅವನ ಘನತೆ, ಅವನ ದಕ್ಷತೆ, ಅವನ ಸ್ವಾಮಿಭಕ್ತಿ ಮುಂತಾದ ಅನೇಕ ಗುಣಗಳು ನಮಗೆ ಸ್ಪಷ್ಟವಾಗಿ ತಿಳಿದು ಬರುತ್ತವೆ. ಅವನು ಯಾವ ಕೆಲಸ ಕೈಗೊಂಡರೂ, ಅದನ್ನು ಸಮರ್ಪಕವಾಗಿ, ಮುಂಚಿತವಾಗಿ ನಿಶ್ಚಯಿಸಿದ್ದಂತೆಯೇ, ನಿರ್ವಹಿಸಿ ಕೃತಕೃತ್ಯನಾಗುವುದು ಅವನಲ್ಲಿನ ವೈಶಿಷ್ಟ್ಯ. ತನ್ನ ಸ್ವಾಮಿಯಾದ ವತ್ಸರಾಜನು ಹಿಂದೆ ವಾಸವದತ್ತೆಯಲ್ಲಿ ಪ್ರೇಮಬದ್ಧನಾಗಿ ಅವಳನ್ನು ಮದುವೆಯಾಗುವುದಕ್ಕೆ ದಾರಿ ಕಾಣದೆ ಇದ್ದಾಗಲೂ ಈ ಸ್ವಾಮಿಭಕ್ತ ಮಂತ್ರಿಯೇ ಅವನಿಗೆ ಸಹಾಯಮಾಡಿ, ವಾಸವದತ್ತೆಯೊಡನೆ ಅವನನ್ನು ಸ್ವದೇಶಕ್ಕೆ ಕರೆತಂದು ಅವರಿಬ್ಬರಿಗೂ ವಿವಾಹ ನಡೆಸಿ ಕೃತಕೃತ್ಯನಾಗಿದ್ದನು. ಈಗಂತೂ ಸಿದ್ಧಾದೇಶದಲ್ಲಿ ನಂಬಿಕೆಯಿಟ್ಟು, ಹೇಗಾದರೂ ಮಾಡಿ ಸಿಂಹಳ ರಾಜಪುತ್ರಿಯನ್ನು ತನ್ನ ಸ್ವಾಮಿಗೆ ಪತ್ನಿಯಾಗಿ ತಂದುಕೊಂಡು ಅವನು ಸಾರ್ವಭೌಮನಾಗುವಂತಾಗಬೇಕೆಂದು ಉದ್ದೇಶಿಸಿ ಅದಕ್ಕಾಗಿ ಒಂದು ವಿಚಿತ್ರವಾದ ಹಂಚಿಕೆಯನ್ನೇರ್ಪಡಿಸುತ್ತಾನೆ. ಈ ಸಂಬಂಧವಾಗಿ ಲಾವಾಣಕದ ಬೆಂಕಿಯ ಅನಾಹುತವನ್ನು ಕಲ್ಪಿಸಿ, ವಾಸವದತ್ತೆಯು ಅಲ್ಲಿ ಸುಟ್ಟುಹೋದಳೆಂದು ಸುಳ್ಳುಸುದ್ದಿ ಹರಡಿದನು. ಸಿಂಹಳರಾಜನು ತನ್ನ ಮಗಳನ್ನು ವತ್ಸರಾಜನಿಗೆ ಕೊಟ್ಟರೆ ವಾಸವದತ್ತೆಗೆ ಪುನಃ ಖೇದ ಉಂಟಾಗುತ್ತದೆಂದು ಹಿಂದೆಗೆದುದರಿಂದ. ಕಾರ್ಯಸಾಧನೆಗಾಗಿ ಎಂತಹ ಹಂಚಿಕೆ ನೋಡಿ! ವಾಸವದತ್ತೆಗೆ ಏನೋ ನೆಪ ಹೇಳಿ ಅವಳನ್ನು ಗೋಪ್ಯವಾಗಿಟ್ಟು ರಾಜನಿಗೆ ಏನೊಂದನ್ನೂ ತಿಳಿಸದೆಯೇ ಇದೆಲ್ಲವನ್ನೂ ಏರ್ಪಡಿಸಿ ಕೊನೆಗೂ ಸಿಂಹಳರಾಜ ತನ್ನ ಮಗಳಾದ ರತ್ನಾವಳಿಯನ್ನು ತನ್ನ ಮುಖ್ಯಮಂತ್ರಿ ವಸುಭೂತಿಯ ಜತೆಯಲ್ಲಿ ಉದಯನನಲ್ಲಿಗೆ ಕಳುಹಿಸಿ ಕೊಡುವಂತೆ ಮಾಡುತ್ತಾನೆ. ಆದರೆ ಸಮುದ್ರಮಧ್ಯೆ ಹಡಗು ಒಡೆದು ರತ್ನಾವಳಿಯೂ ವಸುಭೂತಿಯೂ ಬೇರೆ ಬೇರೆಯಾಗಿ, ಒಬ್ಬರ ಪತ್ತೆ ಇನ್ನೊಬ್ಬರಿಗಿಲ್ಲದಂತೆ ದಡ ಸೇರುತ್ತಾರೆ. ಇವರ ಅರಿವು ಯೌಗಂಧರಾಯಣನಿಗೆ ಇಲ್ಲದಿದ್ದರೂ ಅವನ ಸುದೈವದಿಂದಲೋ ಎಂಬಂತೆ ರತ್ನಾವಳಿಯನ್ನು ಗುರ್ತಿಸಿದ ನಾವಿಕನೊಬ್ಬನು ಅವಳನ್ನು ಕರೆತಂದು ಯೌಗಂಧರಾಯಣನ ವಶಕ್ಕೆ ಒಪ್ಪಿಸುತ್ತಾನೆ. ವೃತ್ತಾಂತವನ್ನೆಲ್ಲಾ ಪರಾಮರ್ಶಿಸಿ ಯೌಗಂಧರಾಯಣ 'ದೈವಾನುಕೂಲ ನಾನು ಕೈಗೊಂ

ಡಿರುವ ಕಾರ್ಯಕ್ಕೆ ಇದೆ; ಹೀಗಾದುದು ಒಳ್ಳೆಯದಕ್ಕೇ ಆಯಿತು. ನಾನಾಗಿ ಈ ಮದುವೆಪ್ರಸ್ತಾಪವೆತ್ತಿದ್ದರೆ ವಾಸವದತ್ತೆಯಲ್ಲಿ ಸಂಪೂರ್ಣ ಪ್ರೇಮಬದ್ಧನಾಗಿರುವ ವತ್ಸರಾಜ ಒಪ್ಪುತ್ತಿದ್ದನೋ ಇಲ್ಲವೋ ಎಂದು ಯೋಚಿಸಿ, ರತ್ನಾವಳಿಯ ಗುರುತನ್ನು ಯಾರಿಗೂ ತಿಳಿಸದೆ 'ಇವಳು ಸಾಗರದಿಂದ ದೊರೆತವಳು ಸಾಗರಿಕೆ' ಎಂದು ಮಾತ್ರ ಹೇಳಿ ಅವಳನ್ನು ವಾಸವದತ್ತೆಯ ರಕ್ಷಣೆಗೇ ಬಿಟ್ಟು ಬಿಡುತ್ತಾನೆ. ಹೀಗೆ ಮಾಡುವುದರಲ್ಲಿ ಅವನ ದೂರದೃಷ್ಟಿ ಗಮನಾರ್ಹ. ಅಂತಃಪುರಕ್ಕೆ ಸೇರಿದ ಸಾಗರಿಕೆಯನ್ನು ಮಹಾರಾಜ ಒಂದಲ್ಲ ಒಂದು ದಿವಸ ನೋಡುವುದು ನಿಶ್ಚಯ; ಅವಳನ್ನು ಅವನು ಕಂಡಮೇಲೆ ಅವಳ ರೂಪ, ಲಾವಣ್ಯಗಳಿಗೆ ಅವನು ಮನಸೋಲುವುದೂ ನಿಶ್ಚಯ. ಅವಳ ಯೌವನ, ರೂಪ, ಲಾವಣ್ಯ ಅಂತಹುದು. ಹೀಗಾದರೆ ಅವರಿಬ್ಬರ ಮದುವೆ ಯಾವ ಶ್ರಮವೂ ಇಲ್ಲದೆ ಆಗುವುದು. ಎಂದು ಯೋಚಿಸಿ ಅವನು ಮಾಡಿದ ಕೆಲಸ, ಅವನ ಲೆಕ್ಕಾಚಾರದಂತೆಯೇ ನಡೆಯುವುದು ಅವನ ದೂರದರ್ಶಿತ್ವವನ್ನೂ, ತನ್ನ ಸ್ವಾಮಿಯ ಸ್ವಭಾವವನ್ನು ಅವನು ಚೆನ್ನಾಗಿ ತಿಳಿದಿದ್ದಾನೆಂಬುದನ್ನೂ ತೋರಿಸುತ್ತದೆ. ತನ್ನ ಸ್ವಾಮಿಯ ಈ ದ್ವಿತೀಯವಿವಾಹಕ್ಕೆ ಪತಿವ್ರತೆಯಾದ ವಾಸವದತ್ತೆಯ ಸಮ್ಮತಿ ದೊರೆತೇ ದೊರಕುತ್ತದೆಂಬುದರಲ್ಲಿ ಅವನಿಗೆ ಸಂದೇಹವಿಲ್ಲದಿರಲು ಎರಡು ಪ್ರಬಲ ಕಾರಣಗಳಿವೆ. ೧. ಈ ಮದುವೆಯಿಂದ ಅವಳ ಪ್ರಿಯ ಪತಿಯ ಸರ್ವತೋಮುಖವಾದ ಅಭ್ಯುದಯವಾಗುವುದು ಮತ್ತು ೨. ನವವಧು ರತ್ನಾವಳಿ ಅವಳ ಸೋದರಮಾವನ ಮಗಳೇ ಆಗಿರುವುದು.

ಧೈರ್ಯದಿಂದ ಕೆಲಸ ಮಾಡಿದರೆ ದೈವಸಹಾಯವಿದ್ದೇ ಇರುತ್ತದೆಂಬುದು ಯೌಗಂಧರಾಯಣನ ನಂಬಿಕೆ. ಅದರಂತೆಯೇ ನಿಃಸ್ವಾರ್ಥವಾದ ಅವನ ಸ್ವಾಮಿಸೇವೆಯಲ್ಲಿ ದೈವಾನುಕೂಲ ಹಂತ ಹಂತದಲ್ಲೂ ಒದಗಿಬರುವುದು ಅವನಿಗೂ ನಮಗೂ ಒಟ್ಟಿಗೇ ಸಂತೋಷವುಂಟುಮಾಡುತ್ತದೆ.

ಯೌಗಂಧರಾಯಣನ ಸ್ವಾಮಿನಿಷ್ಠೆ ಅನನ್ಯಾದೃಶವಾದುದು. ತನ್ನ ಸ್ವಾಮಿಯ ಅಭ್ಯುದಯಕ್ಕಾಗಿಯೇ ಅವನು ಹಗಲೂ ರಾತ್ರಿಯೂ ಶ್ರಮಿಸುತ್ತಿದ್ದರೂ, ಕೊನೆಯಲ್ಲಿ ಎಲ್ಲವೂ ಬಯಲಿಗೆ ಬಂದಾಗ ತನ್ನ ಸ್ವಾಮಿಯು ಏನು ಹೇಳುವನೋ ಎಂಬ ಚಿಂತೆ ಅವನನ್ನು ಸದಾ ಬಾಧಿಸುತ್ತಲೇ ಇದೆ. ಇದಕ್ಕೆ ಕಾರಣ ಸ್ವಾಮಿಯ ಅನುಮತಿಯಿಲ್ಲದೆ ತಾನೇ ಸ್ವತಂತ್ರವಾಗಿ ಈ ಮದುವೆಯ ಏರ್ಪಾಟಿಗೆ ಕೈ ಹಾಕಿರುವುದೇ. 'ಸ್ವೇಚ್ಛಾಚಾರೀ ಭೀತ ಏವಾಸ್ಮಿ ಭರ್ತುಃ' ಎಂಬ ಯೌಗಂಧರಾಯಣನ ಮಾತು, ಎಂತಹ ಪ್ರಭಾವಶಾಲಿಯಾದ ಪದವಿಯಲ್ಲಿರುವವನಾದರೂ ತನ್ನ ಹದ್ದು ಮೀರಿ ಹೋಗುವುದು ತಪ್ಪೆಂಬ ಅವನ ಭಾವನೆಯನ್ನು ಸೂಚಿಸುತ್ತದೆ.

# ಪಾತ್ರಗಳು

— ಪುರುಷರು —

**ಸೂತ್ರಧಾರ**

**ರಾಜ (ವತ್ಸರಾಜ ಉದಯನ)** —ಕೌಶಾಂಬಿಯ ಧೊರೆ; ನಾಯಕ

**ವಿದೂಷಕ (ವಸಂತಕ)**—ನಾಯಕನ ಗೆಳೆಯ

**ಯೌಗಂಧರಾಯಣ**— ಉದಯನನ ಪ್ರಧಾನಮಂತ್ರಿ

**ವಿಜಯವರ್ಮ**— ಉದಯನನ ಸೇನಾಪತಿ ರುಮಣ್ವಂತನ ಸೋದರಳಿಯ

**ವಸುಭೂತಿ**—ಸಿಂಹಳರಾಜ ವಿಕ್ರಮಬಾಹುವಿನ ಮಂತ್ರಿ

**ಬಾಭ್ರವ್ಯ (ಕಂಚುಕೀ)**— ಉದಯನನ ಕಂಚುಕಿ

**ಐಂದ್ರಜಾಲಿಕ**

— ಹೆಂಗಸರು —

ನಟಿ—ಸೂತ್ರಧಾರನ ಹೆಂಡತಿ

**ರತ್ನಾವಳೀ (ಸಾಗರಿಕೆ)**—ವಿಕ್ರಮಬಾಹುವಿನ ಮಗಳು

**ವಾಸವದತ್ತೆ**—ಉದಯನನ ಪಟ್ಟಮಹಿಷಿ

**ಕಾಂಚನಮಾಲೆ**—ವಾಸವದತ್ತೆಯ ಚೇಟಿ

**ಸುಸಂಗತೆ**—ಒಬ್ಬ ಚೇಟಿ; ಸಾಗರಿಕೆಯ ಗೆಳತಿ

**ಮದನಿಕೆ**<br>**ನಿಪುಣಿಕೆ**<br>**ಚೂತಲತಿಕೆ** } ಚೇಟಿಯರು

**ವಸುಂಧರೆ**—ಪ್ರತೀಹಾರಿ

— ಪರೋಕ್ಷ ಪಾತ್ರಗಳು —

**ವಿಕ್ರಮಬಾಹು**—ಸಿಂಹಳದ ರಾಜ; ನಾಯಿಕೆ ಸಾಗರಿಕೆಯ ತಂದೆ

**ರುಮಣ್ವಂತ**—ಉದಯನ ರಾಜನ ಸೇನಾಪತಿ

**ಶಾರಿಕೆ (ಮೇಧಾವಿನಿ)**—ಮಾತಾಡುವ ಹಕ್ಕಿ

**ಶ್ರೀಕಂಠದಾಸ**—ಶ್ರೀ ಪರ್ವತದಿಂದ ಕೌಶಾಂಬಿಗೆ ಬಂದಿರುವ ಧಾರ್ಮಿಕ

———

ನಿರ್ಲಜ್ಜನೇ! ಸ್ವಭಾವತಃ ಕುಟಿಲಳಾದ ಆಕೆಯನ್ನೇ ತೃಪ್ತಿಪಡಿಸು; ಹೇ ಕೃಷ್ಣ ಕಂಠ (=ನೀಲಕಂಠ)! (ನನ್ನ) ಆಲಿಂಗನವನ್ನು ಬಿಡು — ಎಂದು ಯಾವ ಶಿವನನ್ನುದ್ದೇಶಿಸಿ ಗಿರಿಜೆಯು ಹೇಳಿದಳೋ ಆತನು ನಿಮ್ಮನ್ನು ಸಲಹಲಿ. ॥ ೩ ॥

'ಕೋಪದಿಂದ ಜ್ವಲಿಸುತ್ತಿದ್ದ (ನನ್ನ) ಮೂರು ಕಣ್ಣುಗಳ ನೋಟದಿಂದ ಮೂರು ಅಗ್ನಿಗಳೂ ಆರಿಹೋದುವು. ಭಯದಿಂದ ಕಳವಳಗೊಂಡ ಋತ್ವಿಜರೂ ಚಪಲರಾದ ಗಣದೇವತೆಗಳಿಂದ ಅಪಹರಿಸಲ್ಪಟ್ಟ ಪೇಟಾಗಳುಳ್ಳವರಾಗಿ ಕೆಳಗೆ ಬೀಳುತ್ತಿದ್ದರು. ದಕ್ಷನು ಸ್ತೋತ್ರ ಹೇಳುತ್ತಿದ್ದನು. ಅವನ ಹೆಂಡತಿ ಮನ ಕರಗುವಂತೆ ಅಳುತ್ತಿದ್ದಳು. ದೇವತೆಗಳೆಲ್ಲಾ ಓಡಿಹೋದರು.'—ಎಂದು ಗೌರಿಗೆ ಹೇಳುತ್ತಾ (ದಕ್ಷ) ಯಜ್ಞವನ್ನು (ತಾನು) ನಾಶಪಡಿಸಿದ ರೀತಿಯ ಬಗ್ಗೆ ಅಟ್ಟ ಹಾಸಗೊಂಡ ಶಿವನು ನಿಮ್ಮನ್ನು ಸಲಹಲಿ. ॥ ೪ ॥

ನಕ್ಷತ್ರರಾಜ ಚಂದ್ರನಿಗೆ ಜಯ! ದೇವತೆಗಳಿಗೆ ನಮಸ್ಕಾರ. ದ್ವಿಜ ಶ್ರೇಷ್ಠರು ತೊಂದರೆಗೀಡಾಗದಿರಲಿ. ಭೂಮಿಯೂ ಸಸ್ಯಸಮೃದ್ಧಿಯಿಂದ ಕೂಡಿರಲಿ. ಚಂದ್ರನಂತಹ (ಮನೋಹರವಾದ) ಶರೀರವುಳ್ಳ ನರೇಂದ್ರಚಂದ್ರನು ವಿಶೇಷವಾಗಿ ಬೆಳಗಲಿ. ॥ ೫ ॥

6 (ನಾಂದಿಯ ಕೊನೆಯಲ್ಲಿ) 7 **ಸೂತ್ರಧಾರ**— ಅತಿವಿಸ್ತಾರ ಸಾಕು. ಈದಿನ ವಸಂತೋತ್ಸವದಲ್ಲಿ ನಾನು ಬಹುಮಾನಪೂರ್ವಕವಾಗಿ ಕರೆಯಲ್ಪಟ್ಟು ರಾಜನಾದ ಶ್ರೀ ಹರ್ಷದೇವನ ಪಾದಪದ್ಮೋಪಜೀವಿಗಳಾದ, ನಾನಾದಿಗ್ದೇಶಗಳಿಂದ ಬಂದಿರುವ ರಾಜಸಮೂಹದಿಂದ ಹೀಗೆ ಆಜ್ಞಪ್ತನಾದೆ— "ನಮ್ಮ ಸ್ವಾಮಿಯಾದ ಶ್ರೀ ಹರ್ಷದೇವನಿಂದ ಅಪೂರ್ವವಸ್ತುರಚನಾಲಂಕೃತವಾದ **ರತ್ನಾವಳೀ** ಎಂಬ ನಾಟಿಕೆಯು ರಚಿತವಾಗಿದೆಯೆಂದು ಕರ್ಣಾಕರ್ಣಿಕೆಯಾಗಿ ನಾವು ಕೇಳಿದ್ದೇವೆ; ಆದರೆ ಅಭಿನಯಿಸಿದ್ದನ್ನು ನೋಡಿಲ್ಲ. ಆದ್ದರಿಂದ, ಸಕಲ ಜನರ ಹೃದಯಗಳಿಗೂ ಆಹ್ಲಾದಕಾರಿಯಾದ ಅದೇ ದೊರೆಯ ಮೇಲಿನ ಗೌರವದಿಂದಲೂ ಮತ್ತು ನಮ್ಮ ಬಗ್ಗೆ ಅನುಗ್ರಹಬುದ್ಧಿಯಿಂದಲೂ ಯಥಾಕ್ರಮವಾಗಿ (ಆ ನಾಟಿಕೆಯನ್ನು) ನೀನು ಅಭಿನಯಿಸಬೇಕು." ಆದಕಾರಣ ಈಗ ನೇಪಥ್ಯ ರಚನೆಯನ್ನು ಮಾಡಿ, (ಅವರ) ಅಭಿಲಾಷೆಯನ್ನು ಈಡೇರಿಸುತ್ತೇನೆ. ಸಭಿಕರೆಲ್ಲರ ಮನಸ್ಸೂ ನನ್ನಿಂದ ತಣಿಸಲ್ಪಟ್ಟಿದೆಯೆಂಬುದು ನಿಶ್ಚಯ. ಯಾಕೆಂದರೆ—

8 ಶ್ರೀ ಹರ್ಷನು ನಿಪುಣನಾದ ಕವಿ. ಈ ಪರಿಷತ್ತೂ ಗುಣಗಳನ್ನೇ ಗ್ರಹಿಸು

ವಂತಹುದು. ವತ್ಸರಾಜಚರಿತವೂ (ಈ) ಲೋಕದಲ್ಲಿ ಚಿತ್ತಾಕರ್ಷಕವಾದುದು. ನಾವೂ ನಾಟ್ಯದಲ್ಲಿ ದಕ್ಷರು. ಈ ಒಂದೊಂದು ಅಂಶವೇ ಅಪೇಕ್ಷಿತವಾದ ಫಲ ಪ್ರಾಪ್ತಿಗೆಸಾಕು. ನನ್ನ ಭಾಗ್ಯವೃದ್ಧಿಯಿಂದ ಈ ಎಲ್ಲಾ ಗುಣಗಳ ಗುಂಪೂ ಈಗ ಒಟ್ಟುಗೂಡಿರುವಾಗ ಇನ್ನೇನು ? || ೬ ||

9 ಆದ್ದರಿಂದ ಮನೆಗೆ ಹೋಗಿ ಗೃಹಿಣಿಯನ್ನು ಕರೆತಂದು ಸಂಗೀತಕವನ್ನು ಏರ್ಪಡಿಸುತ್ತೇನೆ. (ಮುಂದೆ ಸಾಗಿ, ನೇಪಥ್ಯದ ಕಡೆ ನೋಡಿ) ಇದು ನಮ್ಮ ಮನೆ. ಒಳಗೆ ಹೋಗುತ್ತೇನೆ. (ಪ್ರವೇಶಿಸಿ) ಆರ್ಯೆ, ಇತ್ತ ಬಾ.

10 (ಪ್ರವೇಶಿಸಿ) **ನಟಿ** — ಆರ್ಯಪುತ್ರ, ಇಗೋ ಬಂದಿದ್ದೇನೆ. ಯಾವ ಆಜ್ಞೆಯನ್ನು ಪಾಲಿಸಬೇಕು, ಆರ್ಯನು ಅಪ್ಪಣೆಮಾಡೋಣಾಗಲಿ.

11 **ಸೂತ್ರಧಾರ** — ಆರ್ಯೆ, ಈ ರಾಜಸಮೂಹವು 'ರತ್ನಾವಳಿ' ಯನ್ನು ನೋಡಬೇಕೆಂದು ತುಂಬಾ ಉತ್ಸುಕವಾಗಿದೆ. ಆದ್ದರಿಂದ ನಿನ್ನ ಪಾತ್ರವನ್ನು ವಹಿಸು.

12 **ನಟಿ** — (ಉದ್ವೇಗದಿಂದ) ಆರ್ಯಪುತ್ರ, ನೀನೇನೋ ಈಗ ನಿಶ್ಚಿಂತನಾಗಿದ್ದೀಯೆ. ಆದ್ದರಿಂದ ಏಕೆ ಕುಣಿಯಲೊಲ್ಲೆ? ಅದೃಷ್ಟಹೀನಳಾದ ನನಗೋ, ಒಬ್ಬಳೇ ಒಬ್ಬಮಗಳು. ಅವಳನ್ನೂ ನೀನು ದೇಶಾಂತರದಲ್ಲಿರುವ ವರನಿಗೆ ಗೊತ್ತು ಮಾಡಿದ್ದೀಯೆ. ಈರೀತಿ ದೂರದೇಶದಲ್ಲಿರುವ ವರನ ಜತೆಯಲ್ಲಿ ಈಕೆಯ ಪಾಣಿಗ್ರಹಣ ಹೇಗೆ ತಾನೆ ಆಗುವುದೆಂಬ ಚಿಂತೆಯಿಂದ ನನಗೆ ದಿಕ್ಕೇ ತೋಚದಾಗಿದೆ! ಇನ್ನು ನರ್ತಿಸಲೂ ಬೇಕೇ?

13 **ಸೂತ್ರಧಾರ** — ಆರ್ಯೆ, ದೂರದೇಶದಲ್ಲಿರುವ ವರನೆಂದು ಉದ್ವೇಗಗೊಳ್ಳಬೇಡ. ನೋಡು —

14 ಅನುಕೂಲವಾದ ವಿಧಿಯು ದ್ವೀಪಾಂತರದಿಂದಾಗಲಿ, ಸಮುದ್ರಮಧ್ಯದಿಂದಾಗಲೀ, ದಿಗಂತದಿಂದಾಗಲೀ ಅನಿರೀಕ್ಷಿತವಾಗಿ (ಕರೆ) ತಂದು, (ನಮಗೆ) ಅಭಿಮತವಾದ ಸಂಘಟನೆಯಾಗುವಂತೆ ಮಾಡುತ್ತದೆ. || ೭ ||

15 (ನೇಪಥ್ಯದಲ್ಲಿ) ಸಾಧು! ಭರತಪುತ್ರ, ಸಾಧು! ಹೀಗೆಯೇ ಸರಿ. ಸಂದೇಹವೇನು ? ('ಅನುಕೂಲವಾದ ವಿಧಿಯು ....' ಎಂಬುದನ್ನು ಹೇಳುತ್ತಾನೆ)

16 **ಸೂತ್ರಧಾರ** — (ಕೇಳಿ, ಹರ್ಷದಿಂದ) ಆರ್ಯೆ, ಈ ನನ್ನ ಕಿರಿಯ ತಮ್ಮ ಯೌಗಂಧರಾಯಣನ ಭೂಮಿಕೆಯನ್ನು ವಹಿಸಿ ಬಂದೇಬಿಟ್ಟ! ಆದ್ದರಿಂದ ಬಾ;

ನಾವೂ ನಮ್ಮ ನಮ್ಮ ಭೂಮಿಕೆಗಳನ್ನು ವಹಿಸಲು ಸಿದ್ಧರಾಗೋಣ.

(ಇಬ್ಬರೂ ಹೋಗುವರು)

**ಇಂತು ಪ್ರಸ್ತಾವನೆ**[17]

(ಬಳಿಕ ಯೌಗಂಧರಾಯಣನು ಪ್ರವೇಶಿಸುತ್ತಾನೆ)

18 **ಯೌಗಂಧರಾಯಣ**—ಹೀಗೆಯೇ ಸರಿ. ಸಂದೇಹವೇನು? ('ಅನುಕೂಲವಾದ ವಿಧಿಯು....' ಮುಂತಾಗಿ ಪುನಃ ಹೇಳಿ) ಇಲ್ಲದಿದ್ದರೆ, ಸಿದ್ಧಪುರುಷರ ಆದೇಶದಲ್ಲಿ ನಂಬಿಕೆಯಿಂದ ಪ್ರಾರ್ಥಿತಳಾದ ಸಿಂಹಳರಾಜಪುತ್ರಿಗೆ, ಸಮುದ್ರದಲ್ಲಿ ನೌಕಾಭಂಗದಿಂದ ಮುಳುಗಿಹೋದಾಗ, ಹಲಗೆಯು ಎಲ್ಲಿಂದ ಸಿಕ್ಕಬೇಕು? ಅಂತಹ ಅವಸ್ಥೆಯಲ್ಲಿದ್ದ ಅವಳು, ಸಿಂಹಳದಿಂದ ಹಿಂದಿರುಗಿ ಬರುತ್ತಿದ್ದ ಕೌಶಾಂಬಿಯ ವ್ಯಾಪಾರಿಗೆ ಗೋಚರಳಾದುದೂ ಹೇಗೆ? ಆತನು ಅವಳನ್ನು ರತ್ನಮಾಲೆಯ ವೈಶಿಷ್ಟ್ಯದಿಂದ ಗುರುತಿಸಿ ಇಲ್ಲಿಗೆ ಕರೆತರುವುದಾದುದೂ ಹೇಗೆ? (ಹರ್ಷದಿಂದ) ಸರ್ವಥಾ ನಮ್ಮ ಸ್ವಾಮಿಗೆ ಅಭ್ಯುದಯಗಳು ಒದಗಿಬರುತ್ತಿವೆ. (ಆಲೋಚಿಸಿ) ಅವಳನ್ನು ಪಟ್ಟಮಹಿಷಿಯ ಕೈಗೆ ಗೌರವಪೂರ್ವಕವಾಗಿ ಒಪ್ಪಿಸಿ ನಾನೂ ಸರಿಯಾದ ಕೆಲಸವನ್ನೇ ಮಾಡಿದ್ದೇನೆ. ಕಂಚುಕಿ ಬಾಭ್ರವ್ಯನೂ ಸಿಂಹಳೇಶ್ವರನ ಅಮಾತ್ಯನಾದ ವಸುಭೂತಿಯೊಡನೆ ಹೇಗೋ ಸಮುದ್ರದಿಂದ ದಡಕ್ಕೆ ಬಂದು ಕೋಸಲರ ಮೂಲೋತ್ಪಾಟನಕ್ಕಾಗಿ ಹೋಗಿರುವ ರುಮಣ್ವಂತನೊಡನೆ ಸೇರಿಕೊಂಡಿದ್ದಾನೆಂದು ಕೇಳುತ್ತೇನೆ. ಈರೀತಿ ನಮ್ಮ ಪ್ರಭುವಿನ ಕಾರ್ಯವು ಸಾಧಿತವಾದಂತೆಯೇ ಇದ್ದರೂ ನನಗೆ ಸಮಾಧಾನವುಂಟುಮಾಡುತ್ತಿಲ್ಲ. ಭೃತ್ಯಭಾವವು ಕಷ್ಟವಾದುದೇ ಸರಿ. ಯಾಕೆಂದರೆ—

19 (ನನ್ನ) ಸ್ವಾಮಿಯ ಅಭ್ಯುದಯಕ್ಕೆ ಕಾರಣವಾದ ಮತ್ತು ಅದೃಷ್ಟವು ಸಹಕರಿಸುತ್ತಿರುವ ಈ ಉದ್ಯಮದಲ್ಲಿ ಸಿದ್ಧಿಯುಂಟಾಗುವ ಬಗ್ಗೆ ಸಂಶಯವು ಸತ್ಯವಾಗಿಯೂ ಇಲ್ಲ; ಆದರೂ, ಸ್ವೇಚ್ಛೆಯಿಂದ ವರ್ತಿಸುತ್ತಿರುವೆನಾದ್ದರಿಂದ, ಸ್ವಾಮಿಗೆ ಹೆದರಿಯೇ ಇದ್ದೇನೆ. ||೮||

20 (ನೇಪಥ್ಯದಲ್ಲಿ ಕಲಕಲ. ಆಲಿಸಿ, ಹರ್ಷದಿಂದ) ಮಧುರವಾಗಿ ಬಾರಿಸುತ್ತಿರುವ ಮೃದುವಾದ ಮೃದಂಗಕ್ಕೆ ಹೊಂದಿಕೊಂಡ ಸಂಗೀತದಿಂದ ಇಂಪಾದ ಪುರಜನರ ಚಪ್ಪಾಳೆಯ ಧ್ವನಿಯು ಮುಂಭಾಗದಲ್ಲಿ ವಿಶೇಷವಾಗಿ ಹೆಚ್ಚುತ್ತಿದೆ. ಆದ್ದರಿಂದ, ಮದನೋತ್ಸವದಿಂದ ಅತ್ಯಂತ ಹೆಚ್ಚಿರುವ ಈ ಪುರಜನರ ಪ್ರಮೋದವನ್ನು

ನೋಡಲು ಮಹಾರಾಜನು ಪ್ರಾಸಾದದ ಕಡೆ ಹೊರಟಿರುವನೆಂದು ಊಹಿಸುತ್ತೇನೆ. ಅಂತೆಯೇ —

21 ಯುದ್ಧದ ಮಾತೂ ಇಲ್ಲದಂತೆ ಮಾಡಿರುವವನೂ, (ಜನರಲ್ಲಿ) ಆಸಕ್ತಿಯುಳ್ಳವನೂ, ಜನರ ಮನಸ್ಸಿನಲ್ಲೇ ನೆಲೆಸಿರುವವನೂ, ವಸಂತಕನನ್ನು ಪ್ರಿಯ (ಮಿತ್ರ) ನನ್ನಾಗಿ ಹೊಂದಿರುವವನೂ ಆದ ಸಾಕ್ಷಾತ್ ವತ್ಸೇಶ್ವರನೇ ತನ್ನದೇ ಆದ ಮಹೋತ್ಸವವನ್ನು ನೋಡಲು ತುಂಬಾ ಉತ್ಸುಕನಾಗಿ, ತನ್ನ ಶರೀರದ ಅವಸ್ಥೆ ಮುಗಿದವನೂ, ರತಿಯಿಂದ ಕೂಡಿದವನೂ, ಜನರ ಮನಸ್ಸಿನಲ್ಲೇ ವಾಸ ಮಾಡುವವನೂ, ವಸಂತಋತುವನ್ನೇ ಪ್ರಿಯ (ಮಿತ್ರ) ನನ್ನಾಗಿ ಉಳ್ಳವನೂ ಆದ ಕುಸುಮಬಾಣನಾದ ಮನ್ಮಥನೋಪಾದಿಯಲ್ಲಿ ಬರುತ್ತಿದ್ದಾನೆ. ॥ ೯ ॥

22 (ಮೇಲ್ಗಡೆ ನೋಡಿ) ಓ, ಮಹಾರಾಜನು ಪ್ರಾಸಾದವನ್ನು ಹತ್ತಿಯೇ ಬಿಟ್ಟನು! ಆದ್ದರಿಂದ, ನಾನೂ ಹೋಗಿ ಉಳಿದಿರುವ ಕೆಲಸವನ್ನು ಗಮನಿಸುತ್ತೇನೆ. (ಹೊರಟು ಹೋಗುತ್ತಾನೆ)

### ಇಂತು ವಿಷ್ಕಂಭಕ 23

24 (ಬಳಿಕ ವಸಂತೋತ್ಸವದ ಉಡುಪನ್ನು ಧರಿಸಿ ಆಸನಸ್ಥನಾಗಿ ರಾಜನೂ ವಿದೂಷಕನೂ ಪ್ರವೇಶಿಸುತ್ತಾರೆ.)

25 **ರಾಜ** — (ಹರ್ಷದಿಂದ ನೋಡಿ) ಮಿತ್ರ ವಸಂತಕ!

26 **ವಿದೂಷಕ** — ಅಪ್ಪಣೆಯಾಗಲಿ.

27 **ರಾಜ** — ಶತ್ರುಗಳೆಲ್ಲಾ ನಿರ್ಜಿತರಾಗಿರುವ ರಾಜ್ಯ; ಯೋಗ್ಯನಾದ ಸಚಿವನಲ್ಲಿಟ್ಟ ಸಮಸ್ತ (ರಾಜ್ಯ) ಭಾರ; ವಿಶಿಷ್ಟ ತೊಂದರೆಗಳನ್ನೂ ಹೋಗಲಾಡಿಸಿ ಚೆನ್ನಾಗಿ ಪಾಲಿಸುವುದರಿಂದ ಲಾಲಿತರಾಗಿರುವ ಪ್ರಜೆಗಳು; ಪ್ರದ್ಯೋತನ ಮಗಳು; ವಸಂತ (ಋತು) ಸಮಯ; ಮತ್ತು ನೀನು; — ಹೀಗೆ ಈ ಮಹೋತ್ಸವವು ನನ್ನದೇ ಎಂದು ನಾನೇನೋ ಭಾವಿಸಿದ್ದೇನೆ. ಕಾಮನು ಬೇಕಾದರೆ (ಮದನ ಮಹೋತ್ಸವವೆಂಬ) ಹೆಸರು ಮಾತ್ರದಿಂದ ಬೇಕಾದಷ್ಟು ಸಮಾಧಾನವನ್ನು ಹೊಂದಲಿ. ॥ ೧೦ ॥

28 **ವಿದೂಷಕ** — (ಹರ್ಷದಿಂದ) ಎಲೈ ವಯಸ್ಯ, ಇದು ಹೀಗೆಯೇ ಸರಿ. ಪ್ರಿಯವಯಸ್ಯನಾದ ನೀನು ಈ ರೀತಿ (ನನ್ನೊಡನೆ) ಮಂತ್ರಾಲೋಚನೆ ಮಾಡುತ್ತಿರುವುದರಿಂದ ಈ ಮದನ ಮಹೋತ್ಸವವು ನಿನ್ನದೂ ಅಲ್ಲ, ಕಾಮ

ದೇವನದೂ ಅಲ್ಲ, ಬ್ರಾಹ್ಮಣನಾದ ನನ್ನೊಬ್ಬನದೇ ಎಂದು ನಾನೇನೋ ತಿಳಿದಿದ್ದೇನೆ. (ನೋಡಿ) ಇದರಿಂದ ಪ್ರಯೋಜನ ತಾನೇ ಏನು ? ಇಗೋ, ಮಧುಪಾನದಿಂದ ಮದಿಸಿರುವ ಕಾಮಿನೀ ಜನರು ತಾವಾಗಿಯೇ ಜೀರ್ಕೊಳವೆಗಳನ್ನು ಹಿಡಿದು ನೀರನ್ನು ಚಿಮುಕಿ ಹೊಡೆಯುವುದರಿಂದ ನಗರವಾಸಿಗಳು ಕುಣಿಯುವುದರಿಂದುಂಟಾದ ಕೌತೂಹಲವೇನು ! ಎಲ್ಲಕಡೆಯೂ ಸ್ವಚ್ಛಂದವಾಗಿ ಬಾರಿಸುತ್ತಿರುವ ಮದ್ದಳೆಯೊಡನೆ ಗಟ್ಟಿಯಾಗಿ ಹೊಡೆಯುವ ಚಪ್ಪಾಳೆ ಶಬ್ದಗಳಿಂದ ಮೊಳಗುತ್ತಿರುವ ರಸ್ತೆಗಳ ಆದಿಭಾಗಗಳ ಶೋಭೆಯೇನು! ಮತ್ತು ಎಲ್ಲೆಲ್ಲೂ ಚೆಲ್ಲಿದ ಪರಿಮಳದ ಧೂಳಿನ ರಾಶಿಯಿಂದ ಹೊಂಬಣ್ಣಗೊಂಡ ದಿಗಂತಗಳೇನು! — ಇವುಗಳಿಂದ ಕೂಡಿದ ಮದನ ಮಹೋತ್ಸವವನ್ನು ನೋಡು.

29 **ರಾಜ**—(ಹರ್ಷದಿಂದ ಸುತ್ತಲೂ ನೋಡಿ) ಓಹೋ, ಪುರಜನರ ಪ್ರಮೋದವು ಪರಾಕಾಷ್ಠೆಯನ್ನು ಮುಟ್ಟಿದೆ! ಅದೇ —

30 ಕುಂಕುಮಕೇಸರಿಯ ಪುಡಿಯಿಂದ ಹೊಂಬಣ್ಣವಾಗಿಯೂ ಪ್ರಾತಃಕಾಲದ ಸೊಬಗನ್ನುಂಟುಮಾಡುತ್ತಲೂ ಇರುವ ಚೆಲ್ಲಿದ ಪರಿಮಳದ ಪುಡಿಯ ರಾಶಿಗಳಿಂದಲೂ, ಚಿನ್ನದ ಒಡವೆಗಳ ಪ್ರಕಾಶಗಳಿಂದಲೂ, ಭಾರದಿಂದ ಬಗ್ಗಿಹೋದ ಶಿರಸ್ಸುಗಳ ಮೇಲಿನ ಅಶೋಕಪುಷ್ಪಗಳ ದಂಡೆಗಳಿಂದಲೂ ಈ ಕೌಶಾಂಬೀ ನಗರಿಯು ತನ್ನ ಅಲಂಕಾರದಿಂದಲೇ ತೋರ್ಪಡುವ ಸ್ವೀಯವಾದ ಐಶ್ವರ್ಯದಿಂದ ಕುಬೇರನ ವಿಶಿಷ್ಟಕೋಶವನ್ನೂ ಜಯಿಸಿ, ಚಿನ್ನದ ದ್ರವವನ್ನೇ (ಮೈಮೇಲೆಲ್ಲಾ) ಹಚ್ಚಿಕೊಂಡಿರುವ ಜನರುಳ್ಳದ್ದೋ ಎಂಬಂತೆ ಒಂದೇ ಹಳದಿ ಬಣ್ಣದ್ದಾಗಿ ಶೋಭಿಸುತ್ತಿದೆ. ॥ ೧೧ ॥ ಮತ್ತು—

31 ಜಲಧಾರಾಯಂತ್ರದಿಂದ ಹೊರಬಿದ್ದ ಸಂತತವಾದ ನೀರಿನ ಪ್ರವಾಹದಿಂದ ಎಲ್ಲೆಲ್ಲೂ ತೊಯ್ದುಹೋದ ಮತ್ತು ಒಟ್ಟಿಗೆ ಜೋರಾಗಿ ತುಳಿಯುವುದರಿಂದಾದ ಕೆಸರಿನಲ್ಲೇ ಜರುಗುತ್ತಿರುವ ಕ್ರೀಡೆಯುಳ್ಳ ಪ್ರಾಂಗಣವಲ್ಲಿ (ಅವರ) ಮುಂಭಾಗದ ಕುಟ್ಟಿಮ ಭೂಮಿಯನ್ನು, ಉಚ್ಛೃಂಖಲವಾಗಿ ಓಡಾಡುವ ಪ್ರೌಢಸ್ತ್ರೀಯರ ಕಪೋಲಗಳಿಂದ ಉದುರುತ್ತಿರುವ ಸಿಂಧೂರದ ಬಣ್ಣದಿಂದ ಕೆಂಪಾದ (ತಮ್ಮ) ಹೆಜ್ಜೆಗಳನ್ನಿಡುವುದರ ಮೂಲಕ ಜನರು ಸಿಂಧೂರದ ಬಣ್ಣಕ್ಕೆ ತಿರುಗಿಸುತ್ತಿದ್ದಾರೆ. ॥ ೧೨ ॥

32 **ವಿದೂಷಕ** — (ನೋಡಿ) ವಿದಗ್ಧಜನರು ಜೀರ್ಕೊಳವೆಗಳಲ್ಲಿ ತುಂಬಿದ

ನೀರನ್ನು ವಾರವಿಲಾಸಿನೀ ಜನರ ಮೇಲೆ ಚಿರುಕಿ ಹೊಡೆಯುವಾಗ ಅವರು ಸೀತ್ಕರಿಸುವುದರಿಂದ ಮನೋಹರವಾದ ಈ ವಿಲಾಸವನ್ನೂ ಪ್ರಿಯವಯಸ್ಯನು ಗಮನಿಸಲಿ.

33 **ರಾಜ** — (ನೋಡಿ) ವಯಸ್ಯನೇ! ನೀನು ಸರಿಯಾಗಿ ಗಮನಿಸಿದೆ. ಯಾಕೆಂದರೆ—

34 ಎಲ್ಲೆಲ್ಲೂ ಚೆಲ್ಲುತ್ತಿರುವ ಪರಿಮಳದ ಧೂಳಿನಿಂದಾದ ಈ ಅಂಧಕಾರದಲ್ಲಿ ಮೇಲಕ್ಕೆತ್ತಿದ ಹೆಡೆಯ ಆಕೃತಿಯಲ್ಲಿರುವ ಜಲಕ್ರೀಡಾಪಿಚಕಾರಿಗಳನ್ನು ಹಿಡಿದಿರುವ ಈ ಭುಜಂಗಲೋಕವು (=೧ ವಿಟಪುರುಷರು ೨ ಹಾವುಗಳು) ಪಾತಾಳವನ್ನು ಈಗ ನನ್ನ ನೆನಪಿಗೆ ತರುವಂತೆ ಇದೆ. ||೧೩||

35 **ವಿದೂಷಕ** — (ನೋಡಿ) ವಯಸ್ಯ, ನೋಡು, ನೋಡು! ಈ ಮದನಿಕೆ ಮದನ ಪರವಶಳಾಗಿ ತಪ್ಪು ಹೆಜ್ಜೆಗಳನ್ನಿಡುವ ವಸಂತಾಭಿನಯವನ್ನು ನರ್ತಿಸುತ್ತಾ ಚೂತಲತಿಕೆಯ ಜತೆಯಲ್ಲಿ ಈ ಕಡೆಯೇ ಬರುತ್ತಿರುವಳೆಂಬುವನ್ನು ಪ್ರಿಯವಯಸ್ಯನು ನೋಡೋಣವಾಗಲಿ.

36 (ಬಳಿಕ ಮದನಲೀಲೆಯನ್ನು ಅಭಿನಯಿಸುತ್ತಾ ದ್ವಿಪದೀಖಂಡವನ್ನು ಹಾಡುತ್ತಾ ಚೇಟಿಯರಿಬ್ಬರು ಪ್ರವೇಶಿಸುತ್ತಾರೆ. )

37 **ಮದನಿಕೆ** — (ಹಾಡುತ್ತಾಳೆ) ಮನ್ಮಥನ ಪ್ರಿಯದೂತನೂ, ಮಾವಿನಮರಗಳಲ್ಲಿ ಬಹುವಾದ ಮೊಗ್ಗುಗಳನ್ನುಂಟುಮಾಡುವವನೂ, ಪ್ರಣಯಕೋಪದ ಹಿಡಿತವನ್ನು ಸಡಿಲಿಸುವವನೂ ಆದ ದಕ್ಷಿಣಮಾರುತನು ಬೀಸುತ್ತಿದ್ದಾನೆ.||೧೪||

38 ಬಕುಲ ಮತ್ತು ಅಶೋಕವೃಕ್ಷಗಳು ಹೂಬಿಡುವಂತೆ ಮಾಡಿರುವ, ಪ್ರಿಯರೊಡನೆ ಮೇಳನಕ್ಕಾಗಿ ಉತ್ಕಂಠಿತರಾಗಿರುವ, ಕಾಯಲು ಅಸಮರ್ಥರಾಗಿರುವ ಯುವತಿಯರ ಗುಂಪು ಹಂಬಲಿಸುತ್ತಿದೆ. ||೧೫||

ಅಥವಾ 39 ಇಲ್ಲಿ ವಸಂತಮಾಸವು ಮೊದಲು ಜನರ ಹೃದಯಗಳನ್ನು ಮೃದುಗೊಳಿಸುತ್ತದೆ; ಬಳಿಕ ಕಾಮನು ಆಸ್ಪದ ಪಡೆದ ಕುಸುಮಬಾಣಗಳಿಂದ (ಅವುಗಳನ್ನು) ವೇಧಿಸುತ್ತಾನೆ. ||೧೬||

40 **ರಾಜ** — (ಲಕ್ಷಿಸಿ ನೋಡಿ) ಈ ಹೆಂಗಸರ ಈ ಅತಿಶಯವಾದ ಕ್ರೀಡಾರಸವು ಏನು ಸೊಗಸಾಗಿದೆ!

41 ಸ್ತನಭಾರದಿಂದ ಬಗ್ಗಿಹೋಗಿರುವ ಸೊಂಟವು ಮುರಿದು ಹೋಗುವುದನ್ನೂ ಲೆಕ್ಕಿಸದೆ ಕ್ರೀಡಿಸುತ್ತಿರುವ ಈ ಅಮಲೇರಿದ ಹುಡುಗಿಯ ಕೇಶಪಾಶವೂ,

ನೋವಿನಿಂದಲೋ ಎಂಬಂತೆ, ಬಿಚ್ಚಿ ಕೆದರಿಹೋಗಿ ಅಂದವಾಗಿ ಮುಡಿಸಿದ್ದ ಹೂದಂಡೆಯು ಅಲಂಕಾರವನ್ನು ತ್ಯಜಿಸುತ್ತಿದೆ; ಕಾಲುಗಳಲ್ಲಿ ಧರಿಸಿರುವ ಈ ತಂಡೆಗಳೂ ದ್ವಿಗುಣಿತವಾಗಿ ಆಕ್ರಂದಿಸುತ್ತಿವೆ ; ಒಂದೇಸಮನಾದ ಕಂಪನದಿಂದ ಈ ಹಾರವೂ ಅಸ್ತವ್ಯಸ್ತವಾಗಿ ಎಡೆಬಿಡದೆ ಆಕೆಯ ಎದೆಗೆ ಬಡಿಯುತ್ತಿದೆ. ॥ ೧೭ ॥

42 **ವಿದೂಷಕ**— ವಯಸ್ಯ, ನಾನೂಕೂಡ ಈ ಹೆಂಗಸರ ಮಧ್ಯೆ ನರ್ತಿಸುತ್ತಾ ಮದನಮಹೋತ್ಸವವನ್ನು ಸನ್ಮಾನಿಸುತ್ತೇನೆ.

43 **ರಾಜ** — (ನಗುತ್ತಾ) ವಯಸ್ಯ, ಹಾಗೆಯೇ ಮಾಡು.

44 **ವಿದೂಷಕ** — ನೀನು ಹೇಗೆ ಆಜ್ಞಾಪಿಸಿದರೆ ಹಾಗೆ. (ಎದ್ದು ಚೇಟಿಯರ ನಡುವೆ ನರ್ತಿಸುತ್ತಾನೆ) ಎಲೈ ಪೂಜ್ಯೆ ಮದನಿಕೆ, ಪೂಜ್ಯೆ ಚೂತಲತಿಕೆ, ನನಗೂ ಈ ಚರ್ಚರಿಕೆಯನ್ನು ಕಲಿಸಿಕೊಡಿ.

45 **ಇಬ್ಬರೂ** — ಹತಾಶ! ಇದು ಚರ್ಚರಿಯಲ್ಲ; ದ್ವಿಪದೀಖಂಡ.

46 **ವಿದೂಷಕ** — (ಹರ್ಷದಿಂದ) ಏನು, ಈ 'ಖಂಡ'ದಿಂದ ಮೋದಕಗಳನ್ನು ಮಾಡುತ್ತಾರೆಯೇ ?

47 **ಮದನಿಕೆ** — (ನಕ್ಕು) ಇಲ್ಲ, ಇಲ್ಲ; ಇದನ್ನು ಪಠಿಸುತ್ತಾರೆ.

48 **ವಿದೂಷಕ**— (ವಿಷಾದದಿಂದ) ಪಠಿಸುವುದಾದರೆ, ಇದರಿಂದ ಪ್ರಯೋಜನವಿಲ್ಲ. ಪ್ರಿಯವಯಸ್ಯನ ಬಳಿಗೇ ಹೋಗುತ್ತೇನೆ. (ಹೋಗಲಿಚ್ಛಿಸುತ್ತಾನೆ)

49 **ಚೇಟಿಯರು**— ಬಾ, ಆಡೋಣ, ವಸಂತಕ. ಇದೇನು, ಎಲ್ಲಿಗೆ ಹೊರಟೆ ? (ಎಂದು ಬಹುವಿಧವಾಗಿ ವಸಂತಕನನ್ನೆಳೆಯುತ್ತಾರೆ. ವಿದೂಷಕನು ಬಲವಂತವಾಗಿ ಹೊರಟು ಹೋಗುತ್ತಾನೆ)

50 **ವಿದೂಷಕ** — (ರಾಜನ ಬಳಿಗೆ ಹೋಗಿ) ವಯಸ್ಯ, ನರ್ತಿಸಿ ಬಂದೆ; ಇಲ್ಲ, ಇಲ್ಲ; ಕ್ರೀಡಿಸಿ ಓಡಿ ಬಂದು ಬಿಟ್ಟೆ.

51 **ರಾಜ** — ಒಳ್ಳೆಯ ಕೆಲಸ ಮಾಡಿದೆ.

52 **ಚೂತಲತಿಕೆ** — ಚೇಟಿ ಮದನಿಕೆ, ಬಹಳಕಾಲ ಕ್ರೀಡಿಸಿದ್ದೇವೆ. ಆದ್ದರಿಂದ, ಬಾ ; ಒಡತಿಯ ಸಂದೇಶವನ್ನು ಮಹಾರಾಜನಿಗೆ ನಿವೇದಿಸೋಣ.

63 **ಮದನಿಕೆ** — ಬಾ, ಹಾಗೆಯೇ ಮಾಡೋಣ.

54 **ಚೇಟಿಯರು** — (ಹತ್ತಿರಕ್ಕೆ ಹೋಗಿ) ಒಡೆಯನಿಗೆ ಜಯವಾಗಲಿ! ಒಡೆಯನೇ, ಮಹಾರಾಣಿಯು ಆಜ್ಞಾಪಿಸುತ್ತಾಳೆ .... (ಅರ್ಧೋಕ್ತಿಯಲ್ಲಿ, ಲಜ್ಜೆಯನ್ನು ತೋರಿಸುತ್ತಾ) ಇಲ್ಲ, ಇಲ್ಲ; ವಿಜ್ಞಾಪಿಸುತ್ತಾಳೆ.

55 **ರಾಜ** — (ಹರ್ಷದಿಂದ ನಕ್ಕು, ಆದರದೊಡನೆ) ಆಜ್ಞಾಪಿಸುತ್ತಾಳೆ ಎಂಬುದೇ ರಮಣೀಯವಾಗಿದೆ, ಅದೂ ಈ ದಿನದ ಮದನಮಹೋತ್ಸವದಲ್ಲಿ ಇನ್ನೂ ವಿಶೇಷವಾಗಿ. ಆದ್ದರಿಂದ ಹೇಳು; ದೇವಿಯು ಏನೆಂದು ಆಜ್ಞಾಪಿಸುತ್ತಾಳೆ ?

56 **ವಿದೂಷಕ**— ಆಃ, ತೊತ್ತಿನಮಗಳೇ! ಏನೆಂದು ದೇವಿಯು ಆಜ್ಞಾಪಿಸುತ್ತಾಳೆ ?

57 **ಚೇಟಿಯರು** — ಹೀಗೆ ಮಹಾರಾಣಿಯು ವಿಜ್ಞಾಪಿಸುತ್ತಾಳೆ— 'ಈ ದಿನ ನಾನು ಮಕರಂದೋದ್ಯಾನಕ್ಕೆ ಹೋಗಿ ಕೆಂಪು ಅಶೋಕ ವೃಕ್ಷದ ತಳದಲ್ಲಿ ಸ್ಥಾಪಿಸಿರುವ ಮನ್ಮಥದೇವನ ಪೂಜೆಯನ್ನು ಮಾಡಬೇಕು. ಆಗ ಆರ್ಯಪುತ್ರನು ಹತ್ತಿರ ಇರಬೇಕು'— ಎಂದು.

58 **ರಾಜ** —(ಆನಂದದಿಂದ) ವಯಸ್ಯನೇ, ಒಂದು ಉತ್ಸವದಿಂದ ಮತ್ತೊಂದು ಉತ್ಸವ ಒದಗಿದೆಯೆಂದೇ ಹೇಳಬೇಕಲ್ಲವೇ ?

59 **ವಿದೂಷಕ**— ಆದ್ದರಿಂದ, ವಯಸ್ಯನೇ, ಏಳು; ಅಲ್ಲಿಗೇ ಹೋಗೋಣ. ಅಲ್ಲಿಗಾದರೂ ಹೋದರೆ, ಬ್ರಾಹ್ಮಣಬಾಲಕನಾದ ನನಗೆ ಸ್ವಸ್ತಿವಾಯನವೇನಾದರೂ ದೊರಕಬಹುದು.

60 **ರಾಜ**— ಮದನಿಕೆ, ನಾನೂ ಮಕರಂದೋದ್ಯಾನಕ್ಕೆ ಇನ್ನೇನು ಬಂದುಬಿಟ್ಟೆ, ಎಂದು ಹೇಳಲು ಹೋಗು.

61 **ಚೇಟಿಯರು**— ಮಹಾರಾಜನ ಅಪ್ಪಣೆಯಂತೆ. (ಇಬ್ಬರೂ ಹೋಗುತ್ತಾರೆ.)

62 **ರಾಜ**— ಗೆಳೆಯನೇ, ಮಕರಂದೋದ್ಯಾನದ ಮಾರ್ಗವನ್ನು ತೋರಿಸು.

63 **ವಿದೂಷಕ** — ಮಹಾರಾಜರು ಹೀಗೆ ಬರೋಣವಾಗಲಿ. (ಇಬ್ಬರೂ ಮುಂದೆ ಸಾಗುತ್ತಾರೆ. ಮುಂದೆ ನೋಡಿ) ಇದು ಮಕರಂದೋದ್ಯಾನ; ಬಾ, ಒಳಕ್ಕೆ ಹೋಗೋಣ. (ಪ್ರವೇಶಿಸುತ್ತಾರೆ. ನೋಡಿ, ವಿಸ್ಮಯದಿಂದ) ಗೆಳೆಯನೇ, ನೋಡು ನೋಡು; ಮಲಯಮಾರುತದಿಂದ ತೂಗಾಡುವ ಮೊಗ್ಗುಗಳಿಂದ ಕೂಡಿದ ಮಾವಿನ ಹೂಗಳ ಪರಾಗರೇಣುಪಟಲಗಳಿಂದೇರ್ಪಟ್ಟ ಮೇಲ್ಕಟ್ಟು ಉಳ್ಳ ಮಕರಂದೋದ್ಯಾನವು ಮದವೇರಿದ ದುಂಬಿಗಳು ಹೊರಗೆಡುವುವ ಝೇಂಕಾರದೊಡನೆ ಬೆರೆತ ಕೋಗಿಲೆಗಳ ಆಲಾಪ ಸಂಗೀತದ ಸುಖವನ್ನುಂಟು ಮಾಡುತ್ತಾ ನಿನ್ನ ಆಗಮನದಲ್ಲಿ ಆದರ ತೋರುತ್ತಿರುವಂತಿದೆ.

64 **ರಾಜ**— (ಸುತ್ತಲೂ ನೋಡಿ) ಆಹಾ, ಮಕರಂದೋದ್ಯಾನದ ಸೌಂದರ್ಯವು ಎಷ್ಟು ಅತಿಶಯವಾಗಿದೆ !

65 ಮೊಳಕೆಯಲ್ಲಿರುವ ಹವಳದ ಕಾಂತಿಯುಳ್ಳ ಚಿಗುರೆಲೆಗಳಿಂದ ಕೆಂಪು ಬಣ್ಣದ ಹೊಳಪನ್ನು ಹೊಂದಿರುವ ಈ ವೃಕ್ಷಗಳು ದುಂಬಿಗಳ ಸಮೂಹಗಳ ಮಧುರವಾದ ಝೇಂಕಾರಗಳಿಂದ ಅವ್ಯಕ್ತವಾಗಿ ಮಾತನಾಡುವ ಭಂಗಿಯನ್ನು ವಹಿಸಿ, ಮಲಯಮಾರುತಗಳ ಬೀಸುಪಿಕೆಯಿಂದ ತೂಗಾಡುತ್ತಿರುವ ಕೊಂಬೆಗಳ ಸಮೂಹಗಳಿಂದ ತೂರಾಡುತ್ತಾ ಈಗ ಈ ವಸಂತ ಸಮಯದ ಪ್ರಸಕ್ತಿಯನ್ನು ಹೊಂದಿ ಮದ್ಯಪಾನದಿಂದ ಮತ್ತರಾದವರಂತೆ ಕಂಗೊಳಿಸುತ್ತಿವೆ. ||೧೮||

ಮತ್ತು 66 ಬಕುಳವೃಕ್ಷಗಳು ಹೂ ಸುರಿಸುವುದರ ಮೂಲಕ ತಮ್ಮ ಬುಡದಲ್ಲಿ (ಸುಂದರಿಯರು) ಮುಕ್ಕಳಿಸಿದ ಮದ್ಯವನ್ನು ಮೂಸಿ ನೋಡುವಂತಿವೆ; ತರುಣಿಯ ಮುಖ ಚಂದ್ರನು ಇನ್ನೂ ಕೆಂಪಗಿರುವಾಗಲೇ ಬಹುಕಾಲದ ಮೇಲೆ ಈಗ ಸಂಪಿಗೆ ಗಿಡಗಳು (ಹೂಗಳಿಂದ) ಶೋಭಿಸುತ್ತಿವೆ. ದುಂಬಿಯ ಹಿಂಡುಗಳು ಅಶೋಕ ವೃಕ್ಷಗಳನ್ನು ಕಾಲಿಂದ ಒದೆಯುವಾಗ (ಆ ರಮಣಿಯರ) ತಂಡೆಗಳ ವಿಶೇಷವಾದ ಝಣತ್ಕಾರಗಳನ್ನು ಕೇಳಿ (ತಮ್ಮ) ಝೇಂಕಾರಗಳ ಹಿಮ್ಮೇಳದಿಂದ ಅದರ ಅನುಕರಣವನ್ನು ಆರಂಭಿಸಿವೆಯೋ ಎನ್ನುವಂತಿವೆ ||೧೯||

67 (ಕಿವಿಗೊಟ್ಟು ಕೇಳಿ) ವಯಸ್ಯ, ಇದು ದುಂಬಿಗಳು ನೂಪುರಧ್ವನಿಯನ್ನನುಕರಿಸುತ್ತಿರುವುದಲ್ಲ; ಮಹಾರಾಣಿಯವರ ಪರಿಜನರ ನೂಪುರ ಶಬ್ದವೇನೇ.

68 **ರಾಜ**— ವಯಸ್ಯ, ನೀನು ಸರಿಯಾಗಿ ಗಮನಿಸಿದೆ.

69 (ಬಳಿಕ ಉಜ್ವಲವಾದ ಉಡುಪನ್ನುಟ್ಟ ವಾಸವದತ್ತೆಯೂ, ಕಾಂಚನಮಾಲೆಯೂ, ಪೂಜೋಪಕರಣಗಳನ್ನು ಹಿಡಿದು ಸಾಗರಿಕೆಯೂ ಪ್ರವೇಶಿಸುತ್ತಾರೆ.)

70 **ವಾಸವದತ್ತೆ**— ಚೇಟಿ ಕಾಂಚನಮಾಲೆ, ಮಕರಂದೋದ್ಯಾನದ ದಾರಿ ತೋರಿಸು.

71 **ಕಾಂಚನಮಾಲೆ**— ಒಡತಿಯು ಈ ಕಡೆ ಬರೋಣವಾಗಲಿ.

72 **ವಾಸವದತ್ತೆ**— (ಮುಂದೆ ಸಾಗಿ) ಚೇಟಿ ಕಾಂಚನಮಾಲೆ, ನಾನು ಮನ್ಮಥ ದೇವನ ಪೂಜೆಯನ್ನು ಎಲ್ಲಿ ಮಾಡಬೇಕಾಗಿರುವುದೋ ಆ ರಕ್ತಾಶೋಕ ವೃಕ್ಷವು ಇನ್ನೆಷ್ಟು ದೂರವಲ್ಲಿದೆ?

73 **ಕಾಂಚನಮಾಲೆ**— ಇಗೋ ಹತ್ತಿರದಲ್ಲೇ ಇದೆ; ಮಹಾರಾಣಿಯವರಿಗೆ ಕಾಣಿಸಲಿಲ್ಲವೆ? ಇಗೋ ಮಹಾರಾಣಿಯವರು ತನ್ನದೆಂದು ಪರಿಗ್ರಹಿಸಿರುವ ಮಾಧವೀ ಲತೆ, ಎಡೆಬಿಡದೆ ದಟ್ಟವಾಗಿ ಬಿಟ್ಟಿರುವ ಹೂಗಳಿಂದ ಶೋಭಿಸುತ್ತಿದೆ. ಇಗೋ ಈ ನವಮಾಲಿಕೆ ಲತೆ, ಅಕಾಲದಲ್ಲಿ ಹೂ ಬಿಡುವಂತೆ ಮಾಡಲು ಆಸಕ್ತಿ

ಯುಳ್ಳ ಮಹಾರಾಜರು ಪ್ರತಿ ದಿನವೂ ಶ್ರಮಿಸುತ್ತಿರುವುದು ಈ ಲತೆಗಾಗಿಯೇ! ಇದರಿಂದಾಚೆಗೆ ಅಗೋ ಆ ರಕ್ತಾಶೋಕ ವೃಕ್ಷವು ಕಾಣಿಸುತ್ತಿದೆಯಲ್ಲಾ, ಅಲ್ಲೇ ತಾವು ಪೂಜೆಯನ್ನು ಸಲ್ಲಿಸಬೇಕಾಗಿರುವುದು.

74 **ವಾಸವದತ್ತೆ**— ಹಾಗಾದರೆ ಬಾ; ಅಲ್ಲಿಗೇ ಜಾಗ್ರತೆ ಹೋಗೋಣ.

75 **ಕಾಂಚನಮಾಲೆ**— ಮಹಾದೇವಿಯವರು ಬರೋಣವಾಗಲಿ. (ಎಲ್ಲರೂ ಮುಂದೆ ಸಾಗುತ್ತಾರೆ.)

76 **ವಾಸವದತ್ತೆ**— ಇದೇ ಆ ರಕ್ತಾಶೋಕವೃಕ್ಷ; ನಾನು ಪೂಜೆ ಸಲ್ಲಿಸಬೇಕಾದ ಸ್ಥಳ. ಆದ್ದರಿಂದ ಪೂಜೆಯ ನಿಮಿತ್ತವಾದ ಉಪಕರಣಗಳನ್ನು ತಾ.

77 **ಸಾಗರಿಕೆ**— (ಹತ್ತಿರಕ್ಕೆ ಬಂದು) ಒಡತಿ, ಇಗೋ ಎಲ್ಲಾ ಸಿದ್ಧವಾಗಿದೆ!

78 **ವಾಸವದತ್ತೆ**—(ಗಮನಿಸಿ, ಆತ್ಮಗತ) ಪರಿಜನರದು ಎಂತಹ ಪ್ರಮಾದ! ಯಾವನ ದೃಷ್ಟಿಪಥದಲ್ಲಿ ಈಕೆ ಬೀಳಬಾರದೆಂದು ಪ್ರಯತ್ನಪೂರ್ವಕವಾಗಿ ನಿವಾರಿಸಲಾಗುತ್ತಿದೆಯೋ, ಆತನ ದೃಷ್ಟಿಗೇ ಗೋಚರಳಾಗಿ ಬಿಡುತ್ತಿದ್ದಳಲ್ಲಾ! ಒಳ್ಳೆಯದು. ಹೀಗೆ ಹೇಳುತ್ತೇನೆ. (ಪ್ರಕಾಶ) ಸಾಗರಿಕೆ, ಈ ದಿನ ಪರಿಜನರು ಮದನಮಹೋತ್ಸವಪರವಶರಾಗಿರುವಾಗ ಸಾರಿಕೆಯನ್ನು ಬಿಟ್ಟು ಬಿಟ್ಟು ಇಲ್ಲಿಗೇಕೆ ಬಂದು ಬಿಟ್ಟಿದ್ದೀಯೆ? ಬೇಗ ಅಲ್ಲಿಗೇ ಹೋಗು. ಈ ಪೂಜೋಪಕರಣವೆಲ್ಲವನ್ನೂ ಕಾಂಚನಮಾಲೆಯ ಕೈಯಲ್ಲಿ ಒಪ್ಪಿಸು.

79 **ಸಾಗರಿಕೆ**— ಒಡತಿಯು ಹೇಗೆ ಆಜ್ಞಾಪಿಸಿದರೆ ಹಾಗೆ. (ಕೆಲವು ಹೆಜ್ಜೆಗಳು ಹೋಗಿ, ಆತ್ಮಗತ) ಸಾರಿಕೆಯನ್ನೇನೋ ಸುಸಂಗತೆಯ ಕೈಗೆ ಕೊಟ್ಟಿದ್ದೇನೆ. ನನಗಾದರೋ, ಅನಂಗದೇವನು ನಮ್ಮ ತಂದೆಯ ಅಂತಃಪುರದಲ್ಲಿ ಹೇಗೋ ಹಾಗೆಯೇ ಇಲ್ಲೂ ಪೂಜಿತನಾಗುವನೋ ಅಥವಾ ಬೇರೆ ವಿಧವಾಗಿಯೋ ಎಂಬುದನ್ನು ನೋಡಲು ಆಸೆಯಾಗಿದೆ. ಆದ್ದರಿಂದ ಯಾರಿಗೂ ಕಾಣಿಸದಂತಿದ್ದು ನೋಡುತ್ತೇನೆ. (ಮುಂದೆ ಸಾಗಿ, ನೋಡಿ) ಇಲ್ಲಿ ಪೂಜೆಯಾಗುವ ಸಮಯದೊಳಗಾಗಿ ನಾನೂ ಅನಂಗದೇವನ ಪೂಜೆ ಮಾಡುವುದಕ್ಕೆ ಹೂಗಳನ್ನು ಕುಯ್ಯುತ್ತೇನೆ. (ಕುಸುಮಾವಚಯವನ್ನು ನಟಿಸುತ್ತಾಳೆ.)

80 **ವಾಸವದತ್ತೆ**— ಕಾಂಚನಮಾಲೆ, ಅಶೋಕ ವೃಕ್ಷದ ಬುಡದಲ್ಲಿ ಪ್ರದ್ಯುಮ್ನ ದೇವರನ್ನು ಪ್ರತಿಷ್ಠಾಪಿಸು.

81 **ಕಾಂಚನಮಾಲೆ**—ಒಡತಿಯ ಅಪ್ಪಣೆಯಂತೆ. (ಹಾಗೆಯೇ ಮಾಡುತ್ತಾಳೆ.)

82 **ವಿದೂಷಕ**— (ಮುಂದೆ ಸಾಗಿ, ನೋಡಿ) ವಯಸ್ಯ, ನೂಪುರಗಳ ಶಬ್ದವು ನಿಂತು ಹೋದುದರಿಂದ ಮಹಾರಾಣಿಯವರು ಅಶೋಕವೃಕ್ಷದ ಮೂಲಕ್ಕೆ ಬಂದಿರುವರೆಂದು ಊಹಿಸುತ್ತೇನೆ.

83 **ರಾಜ**— ವಯಸ್ಯ, ಸರಿಯಾಗಿ ಗಮನಿಸಿದೆ. ಇಗೋ, ದೇವಿಯನ್ನು ನೋಡು. ಇವಳಾದರೋ

84 ಕುಸುಮದಂತೆ ಸುಕುಮಾರವಾದ ಮೂರ್ತಿ ಮತ್ತುವ್ರತದ ನಿಯಮದಿಂದ ತೀರ ಕೃಶವಾದ ಮಧ್ಯಭಾಗ (ಸೊಂಟ) ವುಳ್ಳವಳಾಗಿ, ಮನ್ಮಥನ ಪಾರ್ಶ್ವದಲ್ಲಿರುವ ಚಾಪಯಷ್ಟಿಯಂತೆ ತೋರುತ್ತಾಳೆ. || ೨೦ ||

85 ಆದ್ದರಿಂದ, ಬಾ; ಹತ್ತಿರ ಹೋಗೋಣ. (ಹತ್ತಿರಕ್ಕೆ ಹೋಗಿ) ಪ್ರಿಯೆ ವಾಸವದತ್ತೆ !

86 **ವಾಸವದತ್ತೆ** — (ನೋಡಿ) ಇದೇನು ಆರ್ಯಪುತ್ರ ! ಆರ್ಯಪುತ್ರನಿಗೆ ಜಯವಾಗಲಿ ! ಇಗೋ ಆಸನ. ಆರ್ಯಪುತ್ರನು ಇಲ್ಲಿ ಕುಳಿತುಕೊಳ್ಳೋಣವಾಗಲಿ. (ರಾಜನು ನಾಟ್ಯದಿಂದ ಕುಳಿತುಕೊಳ್ಳುತ್ತಾನೆ.)

87 **ಕಾಂಚನಮಾಲೆ**— ಭಟ್ಟಿಣಿ, ಸ್ವಹಸ್ತದಿಂದಲೇ ಕೊಡಲ್ಪಟ್ಟ ಕುಸುಮ, ಕುಂಕುಮ, ಚಂದನ ಮತ್ತು ವಸ್ತ್ರಗಳಿಂದ ಅಲಂಕೃತವಾಗಿರುವ ರಕ್ತಾಶೋಕ ವೃಕ್ಷಕ್ಕೆ ಹೋಗಿ ಪ್ರದ್ಯುಮ್ನ ದೇವನನ್ನು ಪೂಜಿಸೋಣವಾಗಲಿ.

88 **ವಾಸವದತ್ತೆ**—ಪೂಜೋಪಕರಣಗಳನ್ನು ತಾ.

89 (ಕಾಂಚನಮಾಲೆಯು ತರುತ್ತಾಳೆ. ವಾಸವದತ್ತೆ ಹಾಗೆಯೇ ಮಾಡುತ್ತಾಳೆ)

90 **ರಾಜ**— ಪ್ರಿಯೆ ! ಈಗ ತಾನೆ ಸ್ನಾನ ಮಾಡಿರುವುದರಿಂದ ವಿಶೇಷವಾಗಿ ಹೊರಹೊಮ್ಮಿದ ಕಾಂತಿಯೇನು. ಕುಸುಂಭ ಕುಸುಮದಂತಹ ಕೆಂಪು ಬಣ್ಣದಿಂದ ಮನೋಹರವಾಗಿ ಹೊಳೆಯುವ ಪಟ್ಟೆಸೀರೆಯ ಸೆರಗೇನು ಇವುಗಳುಳ್ಳವಳಾಗಿ ಮಕರಧ್ವಜನನ್ನು ಪೂಜಿಸುತ್ತಾ ಹವಳದ ಸಸಿಯಿಂದ ಹೊರಹೊರಟಿರುವ ಲತೆಯಂತೆ ಪ್ರಕಾಶಿಸುತ್ತಿದ್ದೀಯೆ. || ೨೧ || ಮತ್ತು

91 ಪ್ರಿಯೆ, ಮನ್ಮಥನ ಪೂಜೆಯಲ್ಲಿ ನಿರತವಾಗಿರುವ ನಿನ್ನ ಹಸ್ತದ ಸ್ಪರ್ಶ ಹೊಂದಿ ಈ ಅಶೋಕವು ಹೊರಹೊರಟ ಬೇರೊಂದು ಮೃದುತರವಾದ ಚಿಗುರಿನಿಂದ ಕೂಡಿರುವಂತೆ ತೋರುತ್ತಿದೆ. || ೨೨ || ಮತ್ತು

92 ನಿನ್ನ ಪಾಣಿಸ್ಪರ್ಶದ ಆನಂದವನ್ನು ಅನುಭವಿಸ(ಲಾರ)ದಾಗಿರುವ ಈ (ಅನಂಗನಾದ) ಮನ್ಮಥನು ಈ ದಿನ ತನ್ನ ಶರೀರವಿಲ್ಲದಿರುವಿಕೆಯನ್ನು

ನಿಶ್ಚಯವಾಗಿಯೂ ನಿಂದಿಸುವನು. ॥ ೨೩ ॥

93 **ಕಾಂಚನಮಾಲೆ**— ಭಟ್ಟಿಣಿ, ಪ್ರದ್ಯುಮ್ನ ದೇವನು ಅರ್ಚಿತನಾದನು. ಆದ್ದರಿಂದ (ನಿನ್ನ) ಪತಿಗೆ ಪೂಜಾ ಸತ್ಕಾರವನ್ನು ಸಲ್ಲಿಸು.

94 **ವಾಸವದತ್ತೆ**—ಸರಿ; ಕುಸುಮಗಳನ್ನೂ ವಿಲೇಪನ (ಗಂಧ) ವನ್ನೂ ತಾ.

95 **ಕಾಂಚನಮಾಲೆ**— ಭಟ್ಟಿಣಿ, ಇಗೋ ಎಲ್ಲವೂ ಸಿದ್ಧವಾಗಿದೆ.

96 (ವಾಸವದತ್ತೆಯು ರಾಜನನ್ನು ನಾಟ್ಯದಿಂದ ಪೂಜಿಸುತ್ತಾಳೆ.)

97 **ಸಾಗರಿಕೆ**— (ಹೂಗಳನ್ನು ಹಿಡಿದುಕೊಂಡು) ಹಾ ಧಿಕ್! ಹಾ ಧಿಕ್! ಇದೇನು ಹೂಗಳ ಮೇಲಿನ ಲೋಭದಿಂದ ವ್ಯಾಮರೆತವಳಾಗಿ ತುಂಬಾ ಹೊತ್ತು ಮಾಡಿ ಬಿಟ್ಟೆನೆಲ್ಲಾ! ಆದ್ದರಿಂದ ಈ ಸಿಂಧುವಾರ ವೃಕ್ಷದ ಹಿಂದೆ ನನ್ನ ಶರೀರ ವನ್ನು ಮರೆಯಿಸಿಕೊಂಡು ನೋಡುತ್ತೇನೆ. (ನೋಡಿ) ಇದೇನು, ಕುಸುಮಾ ಯುಧನು ಅಪೂರ್ವವಾಗಿ ಪ್ರತ್ಯಕ್ಷನಾಗಿಯೇ ಇದ್ದಾನಲ್ಲಾ! ನಮ್ಮ ತಂದೆಯ ಅರಮನೆಯಲ್ಲಿ ಚಿತ್ರಗತನಾಗಿ ಪೂಜಿತನಾಗುತ್ತಾನೆ. ಇಲ್ಲಿ ಪ್ರತ್ಯಕ್ಷೀಕೃತನಾಗಿ. ಆದ್ದರಿಂದ ನಾನೂ ಇಲ್ಲೇ ಇದ್ದು ಈ ಕುಸುಮಗಳಿಂದ ಕುಸುಮಾಯುಧನಾದ ಭಗವಂತನನ್ನು ಪೂಜಿಸುವೆನು. (ಎಂದು ಹೂಗಳನ್ನು ಎರಚುತ್ತಾಳೆ.) ನಮಸ್ತೇ, ಭಗವನ್ ಕುಸುಮಾಯುಧ! ನನಗೆ ಶುಭದರ್ಶನವುಳ್ಳವನಾಗು. ನೋಡಬೇಕಾ ದ್ದನ್ನು ನೋಡಿಯಾಯಿತು. ನಿನ್ನ ದರ್ಶನವು ವ್ಯರ್ಥವಾಗದಿರಲಿ. (ಎಂದು ನಮ ಸ್ಕರಿಸುತ್ತಾಳೆ) ಆಶ್ಚರ್ಯ, ಆಶ್ಚರ್ಯ! ಎಷ್ಟು ನೋಡಿದರೂ ಪುನಃ ನೋಡಬೇಕೆನ್ನ ತಕ್ಕವನೇ! ಆದ್ದರಿಂದ ನನ್ನನ್ನು ಯಾರಾದರೂ ನೋಡುವುದಕ್ಕೆ ಮುಂಚೆಯೇ ಹೊರಟು ಹೋಗುವೆನು. (ಎಂದು ಕೆಲವು ಹೆಜ್ಜೆ ಮುಂದೆ ಹೋಗುತ್ತಾಳೆ.)

98 **ಕಾಂಚನಮಾಲೆ**— ಆರ್ಯ ವಸಂತಕ, ಬಾ; ಈಗ ನೀನೂ ಸ್ವಸ್ತಿವಾಯನ ವನ್ನು ಸ್ವೀಕರಿಸು. (ವಿದೂಷಕನು ಹತ್ತಿರ ಹೋಗುತ್ತಾನೆ.)

99 **ವಾಸವದತ್ತೆ** — (ಗಂಧ, ಹೂ, ಆಭರಣಗಳನ್ನು ಕೊಡುತ್ತಾ) ಆರ್ಯ, ಸ್ವಸ್ತಿ ವಾಯನವನ್ನು ಸ್ವೀಕರಿಸು. (ಕೊಡುತ್ತಾಳೆ.)

100 **ವಿದೂಷಕ**— (ಹರ್ಷದಿಂದ ತೆಗೆದುಕೊಂಡು) ನಿನಗೆ ಮಂಗಳವಾಗಲಿ.

(ತೆರೆಯ ಹಿಂದೆ ವೈತಾಳಿಕನು ಹಾಡುತ್ತಾನೆ.)

101 ಅಸ್ತಾಚಲದ ಮೇಲೆಯೇ ಸಮಸ್ತ ಕಿರಣಗಳನ್ನೂ ಬಿಟ್ಟು ಬಿಟ್ಟ ಸೂರ್ಯ ನು ಆಕಾಶದ ಕೊನೆಯನ್ನು ಸೇರಿರಲಾಗಿ, ಈ ಸಾಯಂಕಾಲದ ಸಮಯದಲ್ಲಿ ರಾಜರೆಲ್ಲಾ ಒಟ್ಟಿಗೇ ಆಸ್ಥಾನದಲ್ಲಿ ನೆರೆಯುತ್ತಾ, ಕಣ್ಣುಗಳಿಗೆ ಅತಿಶಯವಾದ

**ಆನಂದವುಂಟುಮಾಡುವ ನಿನ್ನ, ಕಮಲಗಳಕಾಂತಿಯನ್ನೂ ಸೂರೆಗೊಂಡಿರುವ,** ಪಾದಗಳಿಗೆ ತಮ್ಮ ಗೌರವ ಸಲ್ಲಿಸಲು ಇದಿರು ನೋಡುತ್ತಿದ್ದಾರೆ,— ಕಣ್ಣುಗಳಿಗೆ ಅತಿಶಯವಾದ ಆನಂದವುಂಟುಮಾಡುವ ಚಂದ್ರನ, ಕಮಲಗಳ ಕಾಂತಿಯನ್ನೂ ಸೂರೆಗೊಂಡಿರುವ, ಕಿರಣಗಳನ್ನು ಸೇವಿಸಲು ಹೇಗೋ ಹಾಗೆ.|| ೨೪||

102 **ಸಾಗರಿಕೆ**— (ಕೇಳಿ ಪರ್ವದಿಂದ ಹಿಂದಿರುಗಿ ರಾಜನನ್ನು ನೋಡಿ ಔತ್ಸುಕ್ಯದಿಂದ) ಯಾವ ರಾಜಾಉದಯನನಿಗೆ ನನ್ನ ತಂದೆಯು ನನ್ನನ್ನು ವಾಚಾದಾನ ಮಾಡಿಬಿಟ್ಟಿದ್ದಾನೋ, ಅವನೇ ಈತನೇನು? ಹಾಗಾದರೆ ಪರ ಸೇವೆಯಿಂದ ಕೃಶವಾಗಿದ್ದರೂ ಈ ನನ್ನ ಶರೀರವು ಈತನ ದರ್ಶನದಿಂದೀಗ ಮಾನ್ಯವಾಗಿದೆ.

103 **ರಾಜ**— ಈ ಉತ್ಸವದಲ್ಲಿ ಮೈಮರೆತ ನಾವು ಸಂಧ್ಯಾತಿಕ್ರಮವನ್ನೂ ಲಕ್ಷಿಸಲೇ ಇಲ್ಲವಲ್ಲಾ! ದೇವಿ, ನೋಡು.

104 ಈ ಪೂರ್ವ ದಿಕ್ಕು ತನ್ನ ಬಿಳುಪೇರಿದ ಮುಖದಿಂದ ಉದಯಾಚಲದ ತಪ್ಪಲು ಪ್ರದೇಶಗಳ ಹಿಂದೆ ನಿಶಾನಾಥನಾದ ಚಂದ್ರನು ಮರೆಯಾಗಿರುವುದನ್ನು ಸೂಚಿಸುತ್ತದೆ;— ಒಬ್ಬ (ವಿರಹಿಣೀ) ರಮಣಿಯು ತನ್ನ ಪ್ರಿಯನು ಹೃದಯದೊಳಗೇ (ಮರೆಯಾಗಿ) ಇರುವುದನ್ನು ತನ್ನ ಬಿಳುಪೇರಿದ ಮುಖದಿಂದ ಹೇಗೆ ಸೂಚಿಸುತ್ತಾಳೋ ಹಾಗೆ.

105 ದೇವಿ, ಆದ್ದರಿಂದ ಏಳೋಣ; ಅರಮನೆಯೊಳಕ್ಕೆ ಹೋಗೋಣ.

(ಎಲ್ಲರೂ ಎದ್ದು ಮುಂದೆ ಸಾಗುತ್ತಾರೆ.)

106 **ಸಾಗರಿಕೆ**— ಓ, ದೇವಿಯವರು ಹೊರಟೇ ಬಿಟ್ಟರು. ಒಳ್ಳೆಯದು, ನಾನೂ ಬೇಗ ಹೋಗುವೆನು. (ರಾಜನನ್ನು ಔತ್ಸುಕ್ಯದಿಂದ ನೋಡಿ, ನಿಟ್ಟುಸಿರು ಬಿಟ್ಟು) ಹಾ ಧಿಕ್! ಮಂದಭಾಗಿನಿಯಾದ ನನಗೆ ಈತನನ್ನು ಚಿರಕಾಲ ನೋಡುವುದಕ್ಕೂ ಸಾಧ್ಯವಾಗಲಿಲ್ಲ! (ಹೊರಟು ಹೋಗುತ್ತಾಳೆ)

107 **ರಾಜ**— (ಮುಂದೆ ಸಾಗುತ್ತಾ) ದೇವಿ, ನೋಡು! ಚಂದ್ರನ ಕಾಂತಿಯನ್ನೂ ತಿರಸ್ಕರಿಸುತ್ತಿರುವ ನಿನ್ನ ಮುಖಕಮಲದಿಂದ ಮೀರಿಸಲ್ಪಟ್ಟಿರುವ ಈ ಕಮಲಗಳು ಇದ್ದಕ್ಕಿದ್ದಂತೆ ಕಳೆಗುಂದುತ್ತಿವೆ. ನಿನ್ನ ಪರಿವಾರದಲ್ಲಿರುವ ವಾರವನಿತೆಯರ ಗೀತಗಳನ್ನು ಕೇಳಿ, (ಈ) ಹೆಣ್ಣು ದುಂಬಿಗಳು ಲಜ್ಜೆಗೊಂಡೋ ಎಂಬಂತೆ ಮೊಗ್ಗುಗಳೊಳಗೆ ಮೆಲ್ಲ ಮೆಲ್ಲಗೆ ಅಡಗಿಕೊಳ್ಳುತ್ತಿವೆ. || ೨೬ ||

(ಎಲ್ಲರೂ ಹೊರಟು ಹೋಗುತ್ತಾರೆ)

## ಇಂತು ಮದನ ಮಹೋತ್ಸವವೆಂಬ ಮೊದಲನೆಯ ಅಂಕ

# ಅಂಕ ೨

(ಬಳಿಕ ಸಾರಿಕೆಯಿರುವ ಪಂಜರವನ್ನು ಕೈಯಲ್ಲಿ ಹಿಡಿದು ಸುಸಂಗತೆ ಪ್ರವೇಶಿಸುತ್ತಾಳೆ)

1 **ಸುಸಂಗತೆ** - ಹಾ ಧಿಕ್! ಹಾ ಧಿಕ್! ಈ ಸಾರಿಕೆಯನ್ನು ನನ್ನ ಕೈಯಲ್ಲಿಟ್ಟು ಪ್ರಿಯಸಖಿ ಸಾಗರಿಕೆ ಈಗ ಎಲ್ಲಿಗೆ ತಾನೇ ಹೋದಳು? ಇವಳನ್ನೆಲ್ಲಿ ತಾನೇ ಕಾಣಲಿ? (ಮುಂದೆ ನೋಡಿ) ಇದೇನು ಈ ನಿಪುಣಿಕೆ ಈ ಕಡೆಯೇ ಬರುತ್ತಿದ್ದಾಳೆ! ಇವಳನ್ನಾದರೂ ಕೇಳುತ್ತೇನೆ.

(ಬಳಿಕ ನಿಪುಣಿಕೆಯು ಪ್ರವೇಶಿಸುತ್ತಾಳೆ)

2 **ನಿಪುಣಿಕೆ**— (ವಿಸ್ಮಯದೊಡನೆ) ಆಶ್ಚರ್ಯ, ಆಶ್ಚರ್ಯ! ದೇವತೆಯ ಪ್ರಭಾವ ಅನನ್ಯ ಸದೃಶವಾದುದೆಂದು ಭಾವಿಸುತ್ತೇನೆ. ಒಡೆಯನ ವೃತ್ತಾಂತ ತಿಳಿದಿದ್ದಾಯಿತು. ಆದ್ದರಿಂದ ಹೋಗಿ ಭಟ್ಟಿಣಿಗೆ ಅರಿಕೆ ಮಾಡುತ್ತೇನೆ. (ಎಂದು ಮುಂದೆ ಸಾಗುತ್ತಾಳೆ)

3 **ಸುಸಂಗತೆ**— (ಹತ್ತಿರಕ್ಕೆ ಹೋಗಿ) ಸಖಿ ನಿಪುಣಿಕೆ, ಇಲ್ಲೇ ಇರುವ ನನ್ನನ್ನೇಕೆ ಲಕ್ಷಿಸದೆ ಈಗ ಮನಸ್ಸಿನಲ್ಲೇ ಆಶ್ಚರ್ಯಪಡುತ್ತಿರುವವಳಂತೆ ಎಲ್ಲಿಗೋ ಹೋಗುತ್ತಿರುವೆ?

4 **ನಿಪುಣಿಕೆ**— ಸುಸಂಗತೆಯೋ! ಸಖಿ ಸುಸಂಗತೆ, ನೀನು ಸರಿಯಾಗಿ ತಿಳಿದೆ. ನನ್ನ ವಿಸ್ಮಯಕ್ಕೆ ಕಾರಣ ಇದು. ಈ ದಿನ ಶ್ರೀ ಪರ್ವತದಿಂದ ಬಂದಿರುವ ಶ್ರೀಕಂಠದಾಸನೆಂಬ ಧಾರ್ಮಿಕನಿಂದ ಅಕಾಲದಲ್ಲಿ ಹೂ ಬಿಡುವಂತ ಮಾಡುವ 'ದೋಹದ' ವನ್ನು ಮಹಾರಾಜರು ಕಲಿತು ತನ್ನ ನೆಚ್ಚಿನ ನವಮಾಲಿಕೆಯು ಕುಸುಮಸಮೃದ್ಧಿಯಿಂದ ಶೋಭಿಸುವಂತೆ ಮಾಡುವರಂತೆ. ಈ ವಿಷಯವನ್ನು ತಿಳಿಯಲು ಮಹಾದೇವಿಯವರಿಂದ ಕಳುಹಿಸಲ್ಪಟ್ಟವ್ಳೆ. ನೀನಾದರೂ ಎಲ್ಲಿಗೆ ಹೊರಟೆ?

5 **ಸುಸಂಗತೆ**— ಪ್ರಿಯಸಖಿ ಸಾಗರಿಕೆಯನ್ನು ಹುಡುಕುವುದಕ್ಕೆ.

6 **ನಿಪುಣಿಕೆ**— ಸಖಿ, ನಿನ್ನ ಪ್ರಿಯಸಖಿ ಸಾಗರಿಕೆಯು ಬಣ್ಣದ ಕುಪಿಕೆ, ಚಿತ್ರ ಬರೆಯುವ ಹಲಗೆ, ವರ್ತಿಕೆಗಳನ್ನು ಹಿಡಿದುಕೊಂಡು ವ್ಯಗ್ರಚಿತ್ತಳಾಗಿಯೋ ಎಂಬಂತೆ ಕದಳೀ ಗೃಹಕ್ಕೆ ಪ್ರವೇಶಿಸುತ್ತಿರುವುದನ್ನು ಕಂಡೆ. ಆದ್ದರಿಂದ ಪ್ರಿಯ ಸಖಿಯ ಬಳಿಗೆ ನೀನು ಹೋಗು. ನಾನು ದೇವಿಯವರ ಹತ್ತಿರಕ್ಕೆ ಹೋಗುವೆನು. (ಇಬ್ಬರೂ ಹೋಗುವರು)

**ಇಂತು ಪ್ರವೇಶಕ**

(ಬಳಿಕ ಚಿತ್ರಫಲಕ ಮತ್ತು ವರ್ತಿಕೆಯನ್ನು ಹಿಡಿದು ಮದನಾವಸ್ಥೆಯನ್ನು ತೋರಿಸುತ್ತಿರುವ ಸಾಗರಿಕೆ ಪ್ರವೇಶಿಸುತ್ತಾಳೆ)

7 **ಸಾಗರಿಕೆ**—(ನಿಟ್ಟುಸಿರು ಬಿಟ್ಟು) ಹೃದಯ, ಪ್ರಸನ್ನವಾಗು, ಪ್ರಸನ್ನವಾಗು! ಹೊಂದಲಸಾಧ್ಯವಾದವನಿಗಾಗಿ ಬಯಸುವ ಈ ಹಠದಿಂದ ಏನು ಪ್ರಯೋಜನ? ಬರೀ ಆಯಾಸ ಮಾತ್ರವೇ ಇದರ ಫಲ! ಅದೂ ಅಲ್ಲದೆ, ಯಾವಾತನನ್ನು ನೋಡಿದ್ದರಿಂದಲೇ ನಿನಗೆ ಸಂತಾಪ ಈ ರೀತಿ ಹೆಚ್ಚುತ್ತಲೇ ಇದೆಯೋ ಅವನನ್ನೇ ಪುನಃ ನೋಡಬೇಕೆಂದು ಅಭಿಲಾಷೆ ಪಡುತ್ತೀಯಲ್ಲಾ, ಇದೆಂತಹ ನಿನ್ನ ಮೂಢತನ! ಅಯ್ಯೋ ನೃಶಂಸವಾದ ಹೃದಯವೇ, ಹುಟ್ಟಿದಾಗಿನಿಂದಲೂ ಜತೆಯಲ್ಲಿ ಬೆಳೆದು ಬಂದ ನನ್ನನ್ನು ಬಿಟ್ಟುಬಿಟ್ಟು ಕ್ಷಣಮಾತ್ರ ಕಂಡ ಪರಿಚಯವುಳ್ಳ ಆತನನ್ನು ಹಿಂಬಾಲಿಸಲು ನಾಚಿಕೆಯಾಗುವುದಿಲ್ಲವೆ? ಮನ್ಮಥನ ಬಾಣ ಬೀಳುವುದೆಂದು ಭಯಪಟ್ಟು ನೀನು ಈ ರೀತಿ ಆಚರಿಸಿದ್ದೀಯೆ. ಒಳ್ಳೆಯದು, ಮನ್ಮಥನನ್ನೇ ಖಂಡಿಸುತ್ತೇನೆ. (ಕಣ್ಣೀರಿಡುತ್ತಾ, ಕೈ ಮುಗಿದುಕೊಂಡು ಮುಂದೆ ಯೂರಿ ನಿಂತು) ಭಗವನ್ ಕುಸುಮಾಯುಧ! ಸಕಲಸುರಾಸುರರನ್ನೂ ಗೆದ್ದಿರುವವನಾಗಿ ಹೆಂಗಸಿನ ಮೇಲೆ ಬಾಣಪ್ರಯೋಗ ಮಾಡಲು ನಾಚಿಕೆಯಾಗುವುದಿಲ್ಲವೆ? ಅಥವಾ, ನೀನೇನೋ ಶರೀರವಿಲ್ಲದವನು! ಸರ್ವಪ್ರಕಾರದಲ್ಲೂ ಮಂದಭಾಗಿನಿಯಾದ ನನಗೆ ಈ ದುರ್ನಿಮಿತ್ತದಿಂದ ಮರಣವೇ ಖಂಡಿತವಾಗಿಯೂ ಒದಗಿ ಬಂದಿದೆ. (ಚಿತ್ರಫಲಕವನ್ನು ನೋಡಿ) ಇಲ್ಲಿಗೆ ಯಾರಾದರೂ ಬರುವುದಕ್ಕೆ ಮುಂಚೆಯೇ, ನನ್ನ ಮನ ಮೆಚ್ಚಿದ ಆತನನ್ನು ಚಿತ್ರಿಸಿ ನೋಡಿ, (ಈಗಾಗಲೇ) ಆಲೋಚಿಸಿರುವಂತೆ ಮಾಡುತ್ತೇನೆ. (ಏಕಾಗ್ರ ಚಿತ್ತೆಯಾಗಿ ಚಿತ್ರಫಲಕವನ್ನು ತೆಗೆದುಕೊಂಡು, ನಿಟ್ಟುಸಿರು ಬಿಟ್ಟು) ವಿಶೇಷವಾದ ಕಂಪನದಿಂದ ನನ್ನ ಮುಂಗೈ ತುಂಬಾ ನಡುಗುತ್ತಲೇ ಇದ್ದರೂ ಆತನನ್ನು ನೋಡಲು ಬೇರೆ ಉಪಾಯವಿಲ್ಲವಾದ್ದರಿಂದ ಹೇಗೋ ಒಂದು ರೀತಿ ಬರೆದು ಕಣ್ಣು ತುಂಬಾ ನೋಡುತ್ತೇನೆ.

(ಎಂದು ನಾಟ್ಯದಿಂದ ಬರೆಯುತ್ತಾಳೆ) (ಬಳಿಕ ಸುಸಂಗತೆಯು ಪ್ರವೇಶಿಸುತ್ತಾಳೆ)

8 **ಸುಸಂಗತೆ** — ಇದೇ ಆ ಕದಳೀಗೃಹ. ಒಳಕ್ಕೆ ಪ್ರವೇಶಿಸುತ್ತೇನೆ. (ಪ್ರವೇಶವನ್ನು ನಟಿಸುತ್ತಾಳೆ. ಪ್ರವೇಶಿಸಿ, ನೋಡಿ, ವಿಸ್ಮಯದಿಂದ) ಇಗೋ ನನ್ನ ಪ್ರಿಯಸಖಿ ಸಾಗರಿಕೆ. ಇದೇನು, ಈಕೆ ಹೆಚ್ಚಾದ ಅನುರಾಗದಿಂದ ತುಂಬಿದ ಮನಸ್ಸುಳ್ಳವಳಾಗಿ ಏನನ್ನೋ ಬರೆಯುತ್ತಾ ನನ್ನನ್ನೂ ಗಮನಿಸುತ್ತಿಲ್ಲ? ಒಳ್ಳೆಯದು. ಈಕೆಯ ದೃಷ್ಟಿಪಥವನ್ನು ತಪ್ಪಿಸಿಕೊಂಡು ಈಕೆ ಬರೆಯುತ್ತಿರುವು

ದೇನೆಂಬುದನ್ನು ನೋಡುತ್ತೇನೆ. (ಸದ್ದಿಲ್ಲದೆ ಆಕೆಯ ಹಿಂದುಗಡೆ ನಿಂತು ನೋಡಿ, ಹರ್ಷದಿಂದ) ಇದೇನು, ಈಕೆಯಿಂದ ಮಹಾರಾಜನೇ ಚಿತ್ರಿತನಾಗಿದ್ದಾನೆ? ಭಲೆ! ಸಾಗರಿಕೆ, ಭಲೆ! ಕಮಲಾಕರವಾದ ಸರೋವರವನ್ನು ಬಿಟ್ಟು ಬೇರೆಲ್ಲಿಯೂ ರಾಜಹಂಸಿಯು ನಲಿದಾಡುವುದಿಲ್ಲ.

9 **ಸಾಗರಿಕೆ** — (ಕಣ್ಣೀರಿಡುತ್ತಾ) ಈತನನ್ನು ಚಿತ್ರಿಸಿದ್ದೇನೋ ಆಯಿತು. ಆದರೆ ಒಂದೇ ಸಮನೆ ಕಣ್ಣೀರು ಬೀಳುತ್ತಿರುವುದರಿಂದ ನನ್ನ ಕಣ್ಣಿಗೆ ಆತನನ್ನು ನೋಡಲು ಸಾಧ್ಯವೇ ಆಗುತ್ತಿಲ್ಲ. (ಮುಖವನ್ನು ಮೇಲಕ್ಕೆತ್ತಿಕೊಂಡು ಕಂಬನಿಗಳನ್ನು ಒರಸಿಕೊಳ್ಳುತ್ತಾ ಸುಸಂಗತೆಯನ್ನು ಕಂಡು ತನ್ನ ಉತ್ತರೀಯವನ್ನು ಚಿತ್ರಫಲಕದ ಮೇಲೆ ಹೊದಿಸಿ, ನಗುತ್ತಾ) ಇದೇನು, ಪ್ರಿಯಸಖಿ ಸುಸಂಗತೆ! (ಎಂದು ಹೇಳಿ, ಆಕೆಯ ಕೈಹಿಡಿದುಕೊಂಡು) ಸಖಿ, ಇಲ್ಲಿ ಕುಳಿತುಕೊ.

10 **ಸುಸಂಗತೆ** — (ಕುಳಿತು, ಬಲಾತ್ಕಾರದಿಂದ ಚಿತ್ರಫಲಕವನ್ನೆಳೆದುಕೊಂಡು) ಸಖಿ, ಚಿತ್ರಫಲಕದಲ್ಲಿ ನಿನ್ನಿಂದ ಚಿತ್ರಿತನಾಗಿರುವ ಈತ ಯಾರು?

11 **ಸಾಗರಿಕೆ**— (ಲಜ್ಜೆಯಿಂದ) ಈಗ ನಡೆಯುತ್ತಿರುವ ಮದನಮಹೋತ್ಸವ ದಲ್ಲಿ(ನ) ಭಗವಾನ್ ಮನ್ಮಥ!

12 **ಸುಸಂಗತೆ**—(ನಗುತ್ತಾ) ಎಷ್ಟು ನಿಪುಣತೆ ನಿನ್ನದು! ಆದರೆ ಚಿತ್ರ ಏನೋ ಶೂನ್ಯವಾಗಿರುವಂತೆ ಕಾಣುತ್ತೆ; ಆದ್ದರಿಂದ ನಾನೂ (ಸ್ವಲ್ಪ) ಬರೆದು 'ರತಿ ಸಮೇತ'ನಾಗುವಂತೆ ಮಾಡುತ್ತೇನೆ. (ಬಣ್ಣವನ್ನು ತೆಗೆದುಕೊಂಡು ನಾಟ್ಯದಿಂದ ರತಿಯ [ನ್ನು ಬರೆಯುವ] ವ್ಯಾಜದಿಂದ ಸಾಗರಿಕೆಯನ್ನು ಚಿತ್ರಿಸುತ್ತಾಳೆ)

13 **ಸಾಗರಿಕೆ**—(ನೋಡಿ, ತಾಳಲಾರದೆ) ಸುಸಂಗತೆ, ನನ್ನನ್ನೇಕೆ ಇಲ್ಲಿ ಚಿತ್ರಿಸಿದೆ?

14 **ಸುಸಂಗತೆ** — (ನಕ್ಕು) ಸಖಿ, ಕಾರಣವಿಲ್ಲದೆ ಏತಕ್ಕೆ ಕೋಪಿಸಿ ಕೊಳ್ಳುತ್ತೀ? ನಿನ್ನಿಂದ ಯಾವಬಗೆಯ ಕಾಮದೇವನು ಚಿತ್ರಿತನಾಗಿದ್ದಾನೋ ಅದೇ ಬಗೆಯ ರತಿಯೇ ನನ್ನಿಂದ ಚಿತ್ರಿತಳಾಗಿದ್ದಾಳೆ. ಆದರೆ, ಎಲ್ಲವನ್ನೂ ಬೇರೆಯ ರೀತಿಯಲ್ಲಿ ತಿಳಿಯುವವಳೇ! ಈ ಮಾತಿನಿಂದ ನಿನಗೇನು ಪ್ರಯೋಜನ? ಎಲ್ಲಾ ವೃತ್ತಾಂತವನ್ನೂ ಹೇಳಿಬಿಡು!

15 **ಸಾಗರಿಕೆ** — (ಲಜ್ಜೆಯಿಂದ, ಸ್ವಗತ) ಹೇಗಿದ್ದರೂ ಪ್ರಿಯಸಖಿಗೆ ತಿಳಿದು ಹೋಗಿದೆ. (ಸುಸಂಗತೆಯ ಕೈ ಹಿಡಿದುಕೊಂಡು, ಪ್ರಕಾಶ) ಪ್ರಿಯಸಖಿ, ನನಗೆ ತುಂಬಾ ನಾಚಿಕೆಯಾಗಿದೆ. ಆದ್ದರಿಂದ ಈ ವೃತ್ತಾಂತವನ್ನು ಇತರರು ಯಾರೂ ತಿಳಿಯದಂತೆ ಮಾಡು.

16 **ಸುಸಂಗತೆ**—ಸಖಿ, ಲಜ್ಜಿಸಬೇಡ. ಇಂತಹ ಕನ್ಯಾರತ್ನ ಅವಶ್ಯವಾಗಿಯೂ ಇಂತಹ ವರನಲ್ಲೇ ಅಭಿಲಾಷೆ ಉಳ್ಳವಳಾಗಿರಬೇಕು. ಆದಾಗ್ಯೂ ಇತರರು ಈ ವೃತ್ತಾಂತವನ್ನು ಅರಿಯದಂತೆ ಮಾಡುತ್ತೇನೆ. ಈ ಮೇಧಾವಿನಿ ಸಾರಿಕೆಯ ಬಗ್ಗೆ ಮಾತ್ರ ಶಂಕಿಸಬೇಕು. (ನಮ್ಮ) ಈ ಸಂಭಾಷಣೆಯನ್ನು ಗ್ರಹಿಸಿದ್ದು ಯಾವಾಗಲಾದರೂ ಯಾರ ಮುಂದಾದರೂ ಹೇಳಿಬಿಡುವುದೇನೋ!

17 **ಸಾಗರಿಕೆ**— ಸಖಿ, ಇದು ಬೇರಾರ ಮುಂದೆಯೂ ಹೇಳದಂತೆ ಚೆನ್ನಾಗಿ ತಯಾರಿಸು.

18 **ಸುಸಂಗತೆ**— ಸಖಿ, ಹೆದರಬೇಡ. ಹಾಗೆಯೇ ಮಾಡುವೆನು.

19 **ಸಾಗರಿಕೆ**—ಸಖಿ, ನನ್ನ ಸಂತಾಪ ಇನ್ನೂ ಹೆಚ್ಚುತ್ತಿದೆ. (ಮದನಾವಸ್ಥೆಯನ್ನು ತೋರಿಸುತ್ತಾಳೆ.)

20 **ಸುಸಂಗತೆ**— (ಸಾಗರಿಕೆಯ ಎದೆಯ ಮೇಲೆ ಕೈಯಿಟ್ಟುಕೊಂಡು) ಸಖಿ, ಸಮಾಧಾನ ಹೊಂದು, ಸಮಾಧಾನ ಹೊಂದು. ಇಗೋ ಈ ಕೊಳದಿಂದ ತಾವರೆ ದಳಗಳನ್ನೂ, ಮೃಣಾಲಿಕೆಗಳನ್ನೂ ತೆಗೆದುಕೊಂಡು ಬೇಗ ಬಂದುಬಿಡುತ್ತೇನೆ. (ಹೋಗಿ, ಪುನಃ ಪ್ರವೇಶಿಸಿ, ತಾವರೆದಳಗಳಿಂದ ಹಾಸುಗೆಯನ್ನೂ ಮೃಣಾಲಗಳ ಬಳೆಗಳನ್ನೂ ನಾಟ್ಯದಿಂದ ರಚಿಸಿ, ಉಳಿದ ತಾವರೆದಳಗಳನ್ನು ಸಾಗರಿಕೆಯ ಎದೆಯ ಮೇಲೆ ಅಪ್ಪುತ್ತಾಳೆ)

21 **ಸಾಗರಿಕೆ**— ಸಖಿ, ಈ ಕಮಲದಳಗಳನ್ನೂ ಮೃಣಾಲವಲಯಗಳನ್ನೂ ತೆಗೆದು ಬಿಡು. ಇವರಿಂದ ಪ್ರಯೋಜನವಿಲ್ಲ. ಸುಮ್ಮನೆ ಏಕೆ ಆಯಾಸ ಪಡುತ್ತೀಯೆ ?

22 'ದುರ್ಲಭನಾದವನಿಗಾಗಿದೆ ನನ್ನ ಪ್ರೀತಿ; ನಾಚಿಕೆಯೂ ಹೆಚ್ಚು; ನಾನೋ ಪರವಶಳು. ಪ್ರಿಯಗೆಳತಿ, ಪ್ರೇಮವು ಪೆಡಸಾದದ್ದು. ಮರಣವೊಂದೇ ಸರಿಯಾದ ಶರಣಲ್ಲವೇ?' ॥ ೧ ॥ (ಎಂದು ಮೂರ್ಛಿತಳಾಗುತ್ತಾಳೆ)

23 **ಸುಸಂಗತೆ**— (ಕರುಣೆಯಿಂದ) ಪ್ರಿಯಸಖಿ ಸಾಗರಿಕೆ, ಸಮಾಧಾನ ತಂದುಕೊ, ಸಮಾಧಾನ ತಂದುಕೊ.

(ತೆರೆಯ ಹಿಂದೆ) 24 ಮೃಗಶಾಲೆಯಿಂದ ತಪ್ಪಿಸಿಕೊಂಡು ಬಂದಿರುವ ಈ ಕೋತಿಯು ತನ್ನ ಕುತ್ತಿಗೆಗೆ ಕಟ್ಟಿದ ಚಿನ್ನದ ಸರಪಣಿಯ ಕಿತ್ತುಳಿದಿರುವ ಭಾಗವನ್ನು ಎಳೆದುಕೊಂಡು, ರಮಣೀಯವಾಗಿ ಹೆಜ್ಜೆಯಿಡೋಣದರಿಂದ ಝಣಝಣಿಸುವ ಗೆಜ್ಜೆಪಟ್ಟಿಯಿಂದೊಡಗೂಡಿ ಬಾಗಿಲುಗಳನ್ನು ದಾಟಿ, ಹೆಂಗಸರಿಗೆ

ಭಯವುಂಟುಮಾಡಿ, ಅಶ್ವಪಾಲಕರಿಂದ ಸಡಗರದೊಡನೆ ಹಿಂಬಾಲಿಸಲ್ಪಡುತ್ತಾ, ದೊರೆಯ ಮಂದಿರದೊಳಕ್ಕೆ ಪ್ರವೇಶಿಸುತ್ತಿದೆ. ||೨|| ಮತ್ತು

25 ಗಂಡಸರ ಪೈಕಿ ಗಣನೆಯಿಲ್ಲದಿರುವುದರಿಂದ ನಾಚಿಕೆಯನ್ನು ದೂರಸರಿಸಿ ಖೋಜಾಗಳೆಲ್ಲಾ ಮಾಯವಾಗಿಬಿಟ್ಟಿದ್ದಾರೆ. ಈ ಕುಳ್ಳನು ಹೆದರಿಕೆಯಿಂದ ಕಂಚುಕಿಯ ಕಂಚುಕದೊಳಗೆ ಅಡಗಿಕೊಳ್ಳುತ್ತಿದ್ದಾನೆ! ಗಡಿನಾಡಿನ ವಾಸಿಗಳಾದ ಕಿರಾತರೂ ತೀರ ಕೊನೆಯಲ್ಲಿ ಸೇರಿಕೊಂಡು ತಮ್ಮ ಹೆಸರಿಗೆ ತಕ್ಕ ಕೆಲಸವನ್ನು ಮಾಡಿದ್ದಾರೆ. ಗೂನುಬೆನ್ನಿನವರು ತಮ್ಮ ಕೆಳಮಟ್ಟದಲ್ಲಿರುವಿಕೆಯಿಂದಲೇ (ಇತರರು) ತಮ್ಮನ್ನು ನೋಡಿಯಾರೆಂಬ ಶಂಕೆಯಿಂದ ಮೆಲ್ಲಮೆಲ್ಲಗೆ ಹೊರಟು ಹೋಗುತ್ತಿದ್ದಾರೆ. ||೩||

26 **ಸುಸಂಗತೆ**— (ಆಲಿಸಿ ಕೇಳಿ, ಮುಂದುಗಡೆ ನೋಡಿ, ಸಂಭ್ರಮದಿಂದೆದ್ದು, ಸಾಗರಿಕೆಯ ಕೈ ಹಿಡಿದುಕೊಂಡು) ಸಖಿ, ಏಳು, ಏಳು. ಈ ಕೆಟ್ಟ ಕೋತಿಯು, ಇಗೋ, ಈ ಕಡೆಯೇ ಬರುತ್ತಿದೆ. ಆದ್ದರಿಂದ ಬಾ. ಈ ತಮಾಲವೃಕ್ಷದ ಅಂಧಕಾರದೊಳಗೆ ಸೇರಿ ಅದಕ್ಕೆ ಸಿಕ್ಕದಂತೆ ತಪ್ಪಿಸಿಕೊಳ್ಳೋಣ.

(ಇಬ್ಬರೂ ಮುಂದೆ ನಡೆದು, ಭಯದಿಂದ ನೋಡುತ್ತಾ ಏಕಾಂತವಾಗಿ ನಿಲ್ಲುತ್ತಾರೆ)

27 **ಸಾಗರಿಕೆ**— ಸುಸಂಗತೆ, ಇದೇನು, ಚಿತ್ರಫಲಕವನ್ನು ಅಲ್ಲೇ ಬಿಟ್ಟುಬಿಟ್ಟೆಯಲ್ಲಾ ? ಯಾರಾದರೂ ಅದನ್ನೇನಾದರೂ ನೋಡಿಬಿಟ್ಟರೆ ?

28 **ಸುಸಂಗತೆ**— ಒಳ್ಳೆಯ ಸ್ಥಾನವನ್ನು ಸೇರಿರುವವಳೇ, ಇನ್ನೂ ಚಿತ್ರಫಲಕವನ್ನಿಟ್ಟುಕೊಂಡು ಏನು ಮಾಡುತ್ತೀಯೆ ? ಮೊಸರನ್ನಕ್ಕಾಗಿ ಹಂಬಲಿಸುವ ಈ ಕೆಟ್ಟ ಮಂಗನಾದರೋ ಪಂಜರದ ಬಾಗಿಲನ್ನು ತೆಗೆದುಬಿಟ್ಟು ಹೊರಟು ಹೋಗಿದೆ. ಈ ಮೇಧಾವಿನೀ ಸಾರಿಕೆಯೂ ಮೇಲಕ್ಕೆ ಹಾರಿ ಎತ್ತಲೋ ಹೋಗುತ್ತಿದೆ. ಆದ್ದರಿಂದ ಬಾ; ಬೇಗ ಹಿಂಬಾಲಿಸೋಣ. ಈ (ನಮ್ಮ) ಸಂಭಾಷಣೆಯ ಮಾತುಗಳನ್ನು ಗ್ರಹಿಸಿದ್ದು, ಯಾರ ಮುಂದಾದರೂ ಹೇಳಿಬಿಟ್ಟೀತು.

29 **ಸಾಗರಿಕೆ**—ಸಖಿ, ಹಾಗೆಯೇ ಮಾಡೋಣ. (ಇಬ್ಬರೂ ಮುಂದೆ ಸಾಗುತ್ತಾರೆ)

(ತೆರೆಯ ಹಿಂದೆ) 30 ಓ! ಓ!. ಆಶ್ಚರ್ಯ, ಆಶ್ಚರ್ಯ !

31 **ಸಾಗರಿಕೆ**— (ನೋಡಿ) ಸುಸಂಗತೆ, (ಆ) ದುಷ್ಟ ವಾನರವೇ ಪುನಃ ಬರುತ್ತಿದೆಯೆಂದು ತೋರುತ್ತೆ.

32 **ಸುಸಂಗತೆ**—(ನೋಡಿ, ನಕ್ಕು) ಓ ಅಂಜುಬುರಕಿ, ಹೆದರ ಬೇಡ. ಈತ (ಸದಾ) ರಾಜನ ಪಕ್ಕದಲ್ಲೇ ಇರುವ ಆರ್ಯ ವಸಂತಕನಲ್ಲವೇ?

33 **ಸಾಗರಿಕೆ**—ಗೆಳತಿ ಸುಸಂಗತೆ, ಈತ ನೋಡಲು ಯೋಗ್ಯನಾದವನೇ ಸರಿ. (ಆದರದಿಂದ ನೋಡುತ್ತಾಳೆ)

34 **ಸುಸಂಗತೆ**—ಸುಸ್ಥಿತಳಾಗಿರುವವಳೇ, ಈತನನ್ನು ನೋಡಿ ಪ್ರಯೋಜನ ವೇನು? ಸಾರಿಕೆ ದೂರ ಹೋಗಿಬಿಟ್ಟಿತಲ್ಲಾ! ಬಾ, (ಅದನ್ನು) ಹಿಂಬಾಲಿ ಸೋಣ. (ಇಬ್ಬರೂ ಹೋಗುತ್ತಾರೆ. ಬಳಿಕ ವಸಂತಕನು ಪ್ರವೇಶಿಸುತ್ತಾನೆ)

35 **ವಿದೂಷಕ**—ಹೀ ಹೀ ಭೋ! ಆಶ್ಚರ್ಯ, ಆಶ್ಚರ್ಯ! ಭಲೆ, ಶ್ರೀ ಕಂಠದಾಸ ಧಾರ್ಮಿಕ, ಭಲೆ! ಆ ದೋಹದವನ್ನು ಕೊಟ್ಟದ್ದರಿಂದಲೇ ನವಮಾಲಿಕೆಯು ಈ ರೀತಿಯಾಗಿ ಎಡೆಬಿಡದೆ ಹೊರಹೊರಟಿರುವ ಹೂಗೊಂಚಲುಗಳಿಂದ ಹೊದಿಸಲ್ಪಟ್ಟ ಕೊಂಬೆಗಳಿಂದ ಕೂಡಿ ಮಹಾರಾಣಿಯವರಿಂದ ಪರಿಗೃಹೀತ ವಾಗಿರುವ ಮಾಧವೀಲತೆಯನ್ನು ಅಣಕಿಸುತ್ತಿದೆಯೋ ಎಂಬಂತೆ ತೋರುತ್ತಿದೆ! ಆದ್ದರಿಂದ ಪ್ರಿಯ ವಯಸ್ಯನ ಬಳಿ ಹೋಗಿ ತಿಳಿಸುತ್ತೇನೆ. (ಮುಂದೆ ಸಾಗಿ, ನೋಡಿ) ಆಗೋ, ಆ ದೋಹದದ ವಿಷಯದಲ್ಲಿ ನಂಬಿಕೆಯಿರುವುದರಿಂದಲೇ, ಕುಸು ಮಿತವಾಗಿರುವ ಆ ನವಮಾಲಿಕೆಯು ಪರೋಕ್ಷವಾಗಿದ್ದರೂ ಪ್ರತ್ಯಕ್ಷವಾಗಿರು ವಂತೆ ನೋಡುತ್ತಾ ಹರ್ಷದಿಂದ ಅರಳಿದ ಕಣ್ಣುಗಳುಳ್ಳವನಾಗಿ ಅವನು ಈ ಕಡೆಯೇ ಬರುತ್ತಿದ್ದಾನೆ. ಆದ್ದರಿಂದ ಅವನ ಬಳಿಗೆ ಹೋಗುತ್ತೇನೆ. (ರಾಜನಿರುವ ಕಡೆಗೆ ಹೋಗುತ್ತಾನೆ)

(ಬಳಿಕ ಮೇಲೆ ಹೇಳಿದ ರೀತಿಯಲ್ಲಿರುವ ರಾಜನು ಪ್ರವೇಶಿಸುತ್ತಾನೆ)

36 **ರಾಜ**— (ಹರ್ಷದಿಂದ) ಕ್ಷಣಮಾತ್ರದಲ್ಲೇ ವಿಶೇಷವಾಗಿ ಮೊಗ್ಗುಗಳನ್ನು ಬಿಟ್ಟು, ಬಿಳುಪೇರಿದ ಕಾಂತಿಯಿಂದ ಕೂಡಿ, ಹೂ ಅರಳುವುದಕ್ಕೆ ಪ್ರಾರಂಭಿಸಿ, ಎಡೆಬಿಡದೆ ಗಾಳಿ ಬೀಸುವುದರಿಂದ ತನ್ನ ಆಯಾಸವನ್ನು ತೋರ್ಪಡಿಸುತ್ತಾ ಇರುವ ಈ ಉದ್ಯಾನಲತೆಯನ್ನು ನೋಡಿ ದೇವಿಯ ಮುಖವು ಕೋಪ ದಿಂದ ಕೆಂಪಡರಿದ ಕಾಂತಿ ಹೊಂದುವಂತೆ ಮಾಡುತ್ತೇನೆ;—ವಿಶೇಷವಾದ ಹಂಬಲದಿಂದ ಕೂಡಿ, ಬಿಳುಪೇರಿದ ಕಾಂತಿಯುಳ್ಳವಳಾಗಿ, ಆಕಳಿಸುತ್ತಾ, ಒಂದೇ ಸಮನೆ ನಿಟ್ಟುಸಿರು ಬಿಡುವುದರ ಮೂಲಕ ತನ್ನ ಆಯಾಸವನ್ನು ತೋರ್ಪಡಿಸುತ್ತಾ ಮನ್ಮಥಾವಸ್ಥೆಯಿಂದಿರುವ ಬೇರೊಬ್ಬ ಹೆಂಗಸನ್ನು ನೋಡಿ ದರೆ ಹೇಗೋ ಹಾಗೆ. || ೪ ||

37 **ವಿದೂಷಕ**— (ಇದ್ದಕ್ಕಿದ್ದಂತೆ ಹತ್ತಿರಕ್ಕೆ ಹೋಗಿ) ಪ್ರಿಯವಯಸ್ಯನಿಗೆ ಜಯವಾಗಲಿ. ವಯಸ್ಯನೇ, ನೀನು ವೃದ್ಧಿ ಹೊಂದುತ್ತಿರುವುದು ಸಂತೋಷ. ಯಾಕೆಂದರೆ, ಆ ದೋಹದವನ್ನು ಕೊಟ್ಟದ್ದರಿಂದಲೇ ನವಮಾಲಿಕೆಯು ಈ ರೀತಿಯಾಗಿ ಎಡೆಬಿಡದೆ ಹೊರಹೊರಟಿರುವ ಹೂ ಗೊಂಚಲುಗಳಿಂದ ಹೊದಿಸಲ್ಪಟ್ಟ ಕೊಂಬೆಗಳಿಂದ ಕೂಡಿ, ಮಹಾರಾಣಿಯವರಿಂದ ಪರಿಗ್ರಹೀತವಾಗಿರುವ ಮಾಧವೀಲತೆಯನ್ನು ಅಣಕಿಸುತ್ತಿದೆಯೋ ಎಂಬಂತೆ ತೋರುತ್ತಿದೆ.

38 **ರಾಜ**— ವಯಸ್ಯ, ಸಂದೇಹವೇನು ? ಮಣಿ, ಮಂತ್ರ ಮತ್ತು ಮೂಲಿಕೆಗಳ ಪ್ರಭಾವ ಯೋಚಿಸಲೂ ಸಾಧ್ಯವಿಲ್ಲದ್ದು. ನೋಡು—

39 ಪುರುಷೋತ್ತಮನಾದ ನಾರಾಯಣನ ವಕ್ಷಃಸ್ಥಲದಲ್ಲಿದ್ದ (ಕೌಸ್ತುಭ) ಮಣಿಯನ್ನು ಕಂಡು ಯುದ್ಧದಲ್ಲಿ ಶತ್ರುಗಳು ಚೆಲ್ಲಾಪಿಲ್ಲಿಯಾದರು. ಪ್ರಭಾವಶಾಲಿಗಳಾದ ಮಂತ್ರಗಳಿಂದ ಸರ್ಪಗಳು ಅಡಗಿಸಲ್ಪಟ್ಟು ಪಾತಾಳವಾಸ ಮಾಡುತ್ತಿವೆ. ಹಿಂದೆ ಮೇಘನಾದನಿಂದ ಹತರಾಗಿದ್ದ ಲಕ್ಷ್ಮಣನೂ ವೀರರಾದ ವಾನರ ಯೋಧರೂ, (ಎಲ್ಲ ಬಗೆಯ ಚಿಕಿತ್ಸಕ) ಗುಣಗಳಿಗೂ ನಿಧಿಯಾದ ಮಹಾ ಮೂಲಿಕೆಯ ವಾಸನೆಯನ್ನು ಸೇವಿಸಿ ಪುನಃ ಜೀವಿತರಾದರು. ‖ ೫ ‖

40 ಆದ್ದರಿಂದ ದಾರಿ ತೋರಿಸು. ಈ ದಿನ ನಾವೂ ಅದನ್ನು ಕಣ್ಣಾರಕಂಡು ಕಣ್ಣುಗಳನ್ನು ಪಡೆದಿರುವುದರ ಫಲವನ್ನನುಭವಿಸೋಣ.

41 **ವಿದೂಷಕ**— (ಠೀವಿಯಿಂದ) ಬರೋಣವಾಗಲಿ.

42 **ರಾಜ**— ಮುಂದೆ ನಡೆ. (ಇಬ್ಬರೂ ಗರ್ವದಿಂದ ಮುಂದೆ ಸಾಗುತ್ತಾರೆ)

43 **ವಿದೂಷಕ**— (ಆಲಿಸಿ ಕೇಳಿ, ಭಯದಿಂದ ಹಿಂದಿರುಗಿ, ರಾಜನ ಕೈ ಹಿಡಿದುಕೊಂಡು, ಸಂಭ್ರಮದೊಡನೆ) ವಯಸ್ಯ, ಬಾ, ಓಡಿ ಹೋಗೋಣ. ಈ ಬಕುಳವೃಕ್ಷದಲ್ಲಿ ಯಾವುದೋ ಭೂತ ವಾಸವಾಗಿದೆ.

44 **ರಾಜ**— ಛೀ ಮೂರ್ಖ ! ಸುಮ್ಮನೆ ನಡೆ. ಇಂತಹದುದಕ್ಕೆ ಇಲ್ಲೇನು ಸಂಭವವಿದೆ ?

45 **ವಿದೂಷಕ**— ಸ್ಪಷ್ಟವಾಗಿಯೇ ಅಕ್ಷರಗಳನ್ನು ಉಚ್ಚರಿಸುತ್ತಿದೆ. ನನ್ನ ಮಾತನ್ನು ನಂಬದಿದ್ದರೆ, ಮುಂದೆ ಬಂದು ನೀನೇ ಆಲಿಸು.

46 **ರಾಜ**—(ಹಾಗೆಯೇ ಮಾಡಿ, ಕೇಳಿ) ಸ್ತ್ರೀ ಸ್ವಭಾವದಿಂದ ಮಧುರವಾಗಿಯೂ, ಸ್ಫುಟವಾದ ಅಕ್ಷರಗಳಿಂದ ಕೂಡಿಯೂ, ಶರೀರವು ಚಿಕ್ಕದಾಗಿರುವುದರಿಂದ ಅನುರಣನ ಇಲ್ಲದ ಧ್ವನಿಯುಳ್ಳದ್ದಾಗಿಯೂ ಇರುವ ಈ ಮಾತನ್ನು ಸಾರಿಕೆಯು ಹೇಳುತ್ತಿದೆಯೆಂದು ಭಾವಿಸುತ್ತೇನೆ. ‖ ೬ ‖

47 (ಮೇಲೆ ನೋಡಿ, ಚೆನ್ನಾಗಿ ಗಮನಿಸಿ) ಇದೇನಿದು, ಸಾರಿಕೆಯೇ!

48 **ವಿದೂಷಕ**—(ವಿಮರ್ಶಿಸಿ)ಏನು, ನಿಜವಾಗಿಯೂ ಸಾರಿಕೆಯೇ ?

49 **ರಾಜ**—(ನಗುತ್ತಾ) ವಯಸ್ಯ, ಹೌದು.

50 **ವಿದೂಷಕ**— ವಯಸ್ಯ, ನೀನು ಅಂಜುಬುರಕ. ಸಾರಿಕೆಯನ್ನು ಭೂತವೆಂದು ಹೇಳುತ್ತೀಯಲ್ಲಾ!

51 **ರಾಜ**— ಛೀ ಮೂರ್ಖ! ನೀನು ಮಾಡಿದ್ದನ್ನು ನನಗೆ ಹಚ್ಚುತ್ತೀಯಾ ?

52 **ವಿದೂಷಕ**— ಓಹೋ, ಹಾಗಾದರೆ ನನ್ನನ್ನು ತಡೆಯಬೇಡ. (ಕೋಪದಿಂದ ದೊಣ್ಣೆಯನ್ನೆತ್ತಿ ಹಿಡಿದು) ಎಲೈ, ತೊತ್ತಿನ ಮಗಳೇ ? ವಸಂತಕ ಹೆದರಿಕೊಳ್ಳುತ್ತಾನೆಂದು ನೀನು ನಿಜವಾಗಿಯೂ ತಿಳಿದಿದ್ದೀಯಾ ? ಹಾಗಾದರೆ ನಿಲ್ಲು; ಸ್ವಲ್ಪ ನಿಲ್ಲು. ದುಷ್ಟ ಜನರ ಹೃದಯದಂತೆ ವಕ್ರವಾಗಿರುವ ಈ ದೊಣ್ಣೆಯನ್ನಿಡಿದು, ಚೆನ್ನಾಗಿ ಹಣ್ಣಾದ ಬೇಲದ ಹಣ್ಣನ್ನು ಬೀಳಿಸುವ ಹಾಗೆ, ಈ ಬಕುಲ ವೃಕ್ಷದಿಂದ ನಿನ್ನನ್ನು ಕೆಳಕ್ಕೆ ಕೆಡವುತ್ತೇನೆ.

53 **ರಾಜ**— (ತಡೆಯುತ್ತಾ) ಮೂರ್ಖ, ಇದು ಏನನ್ನೋ ರಮಣೀಯವಾಗಿ ಹೇಳುತ್ತಿದೆ. ಆದ್ದರಿಂದ ಇದನ್ನೇಕೆ ಹೆದರಿಸುತ್ತೀಯೆ? ಸುಮ್ಮನಿರು, ಕೇಳೋಣ.

(ಇಬ್ಬರೂ ಕಿವಿಗೊಟ್ಟು ಕೇಳುತ್ತಾರೆ)

54 **ವಿದೂಷಕ**— ವಯಸ್ಯ, ಇದು ಹೇಳಿದ್ದನ್ನು ಕೇಳಿದೆಯಾ ? ಇದು ಹೇಳುತ್ತಿದೆ—'ಸಖಿ, ನೀನು ಬರೆದಿರುವ ಈತನಾರು ?' 'ಆಚರಿಸಲ್ಪಡುತ್ತಿರುವ ಮದನಮಹೋತ್ಸವದ ಅನಂಗದೇವ'—ಎಂದು. ತಿರುಗಿ ಹೇಳುತ್ತಿದೆ—'ಸಖಿ, ಇಲ್ಲಿ ನನ್ನನ್ನೇಕೆ ಚಿತ್ರಿಸಿದೆ ?' 'ಸಖಿ, ಕಾರಣವಿಲ್ಲದೆ ಯಾಕೆ ಕೋಪಿಸಿಕೊಳ್ಳುತ್ತೀ ? ನೀನು ಎಂತಹ ಕಾಮದೇವನನ್ನು ಬರೆದಿದ್ದೀಯೋ ಅಂತಹ ರತೀದೇವಿಯನ್ನೇ ನಾನೂ ಬರೆದಿದ್ದೇನೆ! ಆದ್ದರಿಂದ, ಎಲ್ಲವನ್ನೂ ಬೇರೆ ರೀತಿಯಾಗಿ ಎಣಿಸುವವಳೇ! ಈ ಮಾತಿನಿಂದ ನಿನಗೇನು ಪ್ರಯೋಜನ ? ಎಲ್ಲಾ ವೃತ್ತಾಂತವನ್ನೂ ಹೇಳು.'— ವಯಸ್ಯನೇ, ಇದೇನಿರಬಹುದು ?

55 **ರಾಜ**— ವಯಸ್ಯ, ಯಾವಳೋ ಒಬ್ಬಳು ಅನುರಾಗದಿಂದ ಹೃದಯವಲ್ಲಭನನ್ನು ಚಿತ್ರಿಸಿ ಸಖಿಯೆದುರಿಗೆ ಕಾಮದೇವನೆಂಬ ವ್ಯಾಜದಿಂದ ಮರೆಮಾಚಿರುವಳು; ಆದರೆ ಆ ಸಖಿಯು ಅದನ್ನು ಜಾಣತನದಿಂದ ತಿಳಿದು ಅವಳನ್ನೂ ಅಲ್ಲೇ ಬರೆದು ರತಿಯೆಂಬ ನೆಪದಿಂದ ತೋರಿಸದಳೆಂಬುದಾಗಿ ಹೇಳುತ್ತಿದೆಯೆಂದೇ ಊಹಿಸುತ್ತೇನೆ.

56 **ವಿದೂಷಕ**— (ಚಿಟಿಕೆ ಹಾಕುತ್ತಾ) ವಯಸ್ಯ, ಅದೇ ಸರಿ.

57 **ರಾಜ**— ಸುಮ್ಮನಿರು. ತಿರುಗಿ ಹೇಳುತ್ತಿದೆ. ಅದನ್ನು ಕೇಳೋಣ.

58 **ವಿದೂಷಕ**— ತಿರುಗಿ ಇದು ಹೀಗೆ ಹೇಳುತ್ತಿದೆ—'ಸಖಿ, ನಾಚಿಕೆ ಪಡಬೇಡ. ಇಂತಹ ಕನ್ಯಾ ರತ್ನವು ಅವಶ್ಯವಾಗಿಯೂ ಇಂತಹ ವರನಿಗಾಗಿಯೇ ಅಭಿಲಾಷೆ ಪಡಬೇಕು' ಎಂದು. ಮಿತ್ರನೇ, ಈ ಚಿತ್ರಿತಳಾಗಿರುವ ಸ್ತ್ರೀ ನೋಡಲು ಸುಂದರಿಯಾಗಿಯೇ ಇರಬೇಕು.

59 **ರಾಜ**—ಹಾಗಾದರೆ, ಗಮನವಿಟ್ಟು ಕೇಳೋಣ. ಇದರಲ್ಲಿ ನಾವು ಕುತೂಹಲ ಪಡಲು ಅವಕಾಶವಿದೆ. (ಇಬ್ಬರೂ ಕೇಳುತ್ತಾರೆ)

60 **ವಿದೂಷಕ**—ವಯಸ್ಯ, ಇದು ಹೇಳಿದ್ದನ್ನು ಕೇಳಿದೆಯಾ?—'ಸಖಿ, ನನ್ನ ಸಂತಾಪ ಇನ್ನೂ ವಿಶೇಷವಾಗಿ ಹೆಚ್ಚುತ್ತಿದೆ. ಸಖಿ, ಈ ತಾವರೆದಳಗಳನ್ನೂ ಮೃಣಾಲವಲಯಗಳನ್ನೂ ತೆಗೆ. ಅದರಿಂದ ಪ್ರಯೋಜನವಿಲ್ಲ. ನಿಷ್ಕಾರಣವಾಗಿ ಏಕೆ ನಿನ್ನ ಶರೀರಕ್ಕೆ ಆಯಾಸ ಕೊಡುತ್ತೀಯೆ?'—ಎಂದು.

61 **ರಾಜ**—ಮಿತ್ರ, ಕೇಳಿದ್ದು ಮಾತ್ರವಲ್ಲ; ಅಭಿಪ್ರಾಯವನ್ನೂ ಲಕ್ಷಿಸಿದ್ದೇನೆ.

62 **ವಿದೂಷಕ**—ವಯಸ್ಯ, 'ನಾನೇ ಪಂಡಿತ' ಎಂದು ಗರ್ವಿಸಬೇಡ. ಈ ತೊತ್ತಿನ ಮಗಳು ಸಾರಿಕೆ ಈಗಲೂ 'ಕುರ್-ಕುರ್' ಎನ್ನುತ್ತಲೇ ಇದೆ. ಅದೆಲ್ಲವನ್ನೂ ಕೇಳಿ ವಿವರಿಸುವೆನು.

63 **ರಾಜ**—ಸರಿಯಾಗಿ ಹೇಳಿದೆ. (ತಿರುಗಿ ಇಬ್ಬರೂ ಕೇಳುತ್ತಾರೆ)

64 **ವಿದೂಷಕ**—ವಯಸ್ಯ, ಈ ತೊತ್ತಿನ ಮಗಳು ಸಾರಿಕೆ ಚತುರ್ವೇದಿಯಾದ ಬ್ರಾಹ್ಮಣನ ಹಾಗೆ ಋಕ್ಕುಗಳನ್ನು ಹೇಳಲಾರಂಭಿಸಿದೆಯಲ್ಲಾ!

65 **ರಾಜ**—ಮಿತ್ರ, ಅದೇನು ಹೇಳು; ಮನಸ್ಸು ಬೇರೆಲ್ಲೋ ಇದ್ದುದರಿಂದ ಇದು ಏನು ಹೇಳಿತೆಂಬುದನ್ನು ನಾನು ಗಮನಿಸಲಿಲ್ಲ.

66 **ವಿದೂಷಕ**—ಅಯ್ಯೋ, ಅದು ಹೀಗೆ ಹೇಳಿತು—

67 'ದುರ್ಲಭನಾದವನಿಗಾಗಿದೆ ನನ್ನ ಪ್ರೀತಿ; ನಾಚಿಕೆಯೂ ಹೆಚ್ಚು; ನಾನೋ ಪರವಶಳು. ಪ್ರಿಯಸಖಿ, ಪ್ರೇಮವು ಜಡಸಾದದ್ದು. ಮರಣವೊಂದೇ ಸರಿಯಾದ ಶರಣಲ್ಲವೇ?'

68 **ರಾಜ**—(ನಗುತ್ತಾ) ಈ ಬಗೆಯ ಬ್ರಾಹ್ಮಣನಾದ ನಿನ್ನನ್ನು ಬಿಟ್ಟು ಬೇರೆ ಯಾವನು ತಾನೇ ಈ ವಿಧವಾದ ಋಕ್ಕುಗಳನ್ನು ಬಲ್ಲ?

69 **ವಿದೂಷಕ**— ಹಾಗಾದರೆ, ಇದು ಇನ್ನೇನು ?

70 **ರಾಜ**— ಇದು ಒಂದು ಚಿಕ್ಕ 'ಗಾಥೆ'; ಶ್ಲಾಘ್ಯವಾದ ಯೌವನವುಳ್ಳ ಯಾವಳೋ ಒಬ್ಬಳು ತನ್ನ ಪ್ರಿಯತಮನನ್ನು ಸೇರಲಾಗದೆ, ಜೀವನದಲ್ಲಿ ನಿರಾಶಳಾಗಿ ಹೇಳಿದ್ದು.

71 **ವಿದೂಷಕ**— (ಗಟ್ಟಿಯಾಗಿ ನಕ್ಕು) ಮಿತ್ರನೇ, ಈ ವಕ್ರೋಕ್ತಿಗಳಿಂದ ಪ್ರಯೋಜನವೇನು ? ನೇರವಾಗಿ ಏಕೆ ಹೇಳುವುದಿಲ್ಲ- 'ನನ್ನನ್ನು ಸೇರಲಾಗದೆ' —ಎಂದು ? ಹಾಗಲ್ಲದಿದ್ದರೆ ಬೇರೆ ಯಾವನನ್ನು ತಾನೇ ಕಾಮದೇವನೆಂದು ಮರೆಮಾಚಲು ಸಾಧ್ಯ ? (ಕೈ ಚಪ್ಪಾಳೆ ತಟ್ಟಿ, ಗಟ್ಟಿಯಾಗಿ ನಗುತ್ತಾನೆ)

72 **ರಾಜ**—(ಮೇಲ್ಗಡೆ ನೋಡಿ) ಛೀ ಮೂರ್ಖ! ಗಟ್ಟಿಯಾಗಿ ನಕ್ಕು ಈ ಬಡ ಪಾಯಿ ಹಕ್ಕಿಯನ್ನೇಕೆ ಹೆದರಿಸಿಬಿಟ್ಟೆ? ಇದರಿಂದ ಅದು ಹಾರಿ ಬೇರೆಲ್ಲಿಗೋ ಹೊರಟು ಹೋಯಿತು. (ಇಬ್ಬರೂ ಆಕಡೆ ನೋಡುತ್ತಾರೆ)

73 **ವಿದೂಷಕ**— (ನೋಡಿ) ವಯಸ್ಯ, ಬೇರೆ ತಿಳಿದುಕೊಳ್ಳಬೇಡ. ಅದು ಕದಳೀಗೃಹಕ್ಕೆ ಹೋಗಿದೆ. ಆದ್ದರಿಂದ ಬಾ, ಹಿಂಬಾಲಿಸೋಣ. (ಇಬ್ಬರೂ ಮುಂದೆ ಹೋಗುತ್ತಾರೆ)

74 **ರಾಜ**— ತಡೆಯಲಾಗದ ಮದನವ್ಯಥೆಯನ್ನನುಭವಿಸುತ್ತಾ ಕಾಮಿನಿ ಯರು ತಮ್ಮ ಗೆಳತಿಯರೆದುರಿಗಾಡಿದ ಮಾತುಗಳು ಗಿಣಿ, ಮಕ್ಕಳು ಮತ್ತು ಶಾರಿಕೆಗಳಿಂದ ಪುನರುಕ್ತವಾಗಿ ಭಾಗ್ಯಶಾಲಿಗಳ ಕಿವಿಗಳನ್ನು *ಸೇರುತ್ತವೆ. || ೭ ||

75 **ವಿದೂಷಕ**— ವಯಸ್ಯ, ಇದೇ ಕದಳೀಗೃಹ; ಒಳಕ್ಕೆ ಹೋಗೋಣ. ಆ ತೊತ್ತಿನ ಮಗಳು ಸಾರಿಕೆಯನ್ನು ಹುಡುಕುವ ಪ್ರಯತ್ನ ಸಾಕು. ಇಲ್ಲಿ ಮಂದ ಮಾರುತದಿಂದ ಅಲುಗಾಡುತ್ತಿರುವ ಎಳೆಯ ಬಾಳೇ ಎಲೆಯಿಂದ ಶೀತಲವಾಗಿ ರುವ ಶಿಲಾತಲದಲ್ಲಿ ಕುಳಿತು ಮುಹೂರ್ತಕಾಲ ವಿಶ್ರಮಿಸಿಕೊಳ್ಳೋಣ.

76 **ರಾಜ**— ನಿನ್ನ ಇಷ್ಟದಂತೆ. (ಇಬ್ಬರೂ ಕುಳಿತು ಕೊಳ್ಳುತ್ತಾರೆ. ರಾಜನು ನಿಟ್ಟುಸಿರುಬಿಟ್ಟು 'ತಡೆಯಲಾಗದ .... ii 7' ಮುಂತಾಗಿ ಪುನಃ ಹೇಳುತ್ತಾನೆ)

77 **ವಿದೂಷಕ**— (ಮಗ್ಗುಲಾಗಿ ನೋಡಿ) ವಯಸ್ಯ, ತೆರೆದ ಬಾಗಿಲಿನ ಈ ಪಂಜರ ಆ ಸಾರಿಕೆಯದಾಗಿರಬೇಕು.

78 **ರಾಜ**— ಮಿತ್ರ, ಸರಿಯಾಗಿ ನೋಡು.

79 **ವಿದೂಷಕ**— ಅಷ್ಟೇ. (ಮುಂದೆ ಹೋಗಿ, ನೋಡಿ) ಈ ಚಿತ್ರಫಲಕ ಬೇರೆ!

---

* ಶ್ರವಣಪಥದಲ್ಲಿ ಅತಿಥಿಯಾಗಿರುವಿಕೆಯನ್ನು ಹೊಂದುತ್ತವೆ.

ಇದನ್ನೆತ್ತಿ ಕೊಳ್ಳುತ್ತೇನೆ. (ತೆಗೆದು ಕೊಂಡು, ಚೆನ್ನಾಗಿ ನೋಡಿ) ವಯಸ್ಯ, ನೀನು ಅದೃಷ್ಟ ಶಾಲಿ!

80 **ರಾಜ**— (ಕುತೂಹಲದಿಂದ) ಮಿತ್ರ, ಇದು ಏನು ?

81 **ವಿದೂಷಕ**— ನಾನು ಆಗ ಹೇಳಲಿಲ್ಲವೇ — 'ನೀನೇ ಇಲ್ಲಿ ಚಿತ್ರಿತನಾಗಿರುವುದು; ಹಾಗಲ್ಲದಿದ್ದರೆ ಬೇರೆ ಯಾವನನ್ನು ತಾನೇ ಕಾಮದೇವನೆಂದು ಮರೆಮಾಚಲು ಸಾಧ್ಯ?'— ಎಂದು ? ಅದೇ ಇದು.

82 **ರಾಜ** — (ಹರ್ಷದಿಂದ ಎರಡು ಕೈಗಳನ್ನೂ ಚಾಚಿ) ಸಖನೇ ತೋರಿಸು, ತೋರಿಸು.

83 **ವಿದೂಷಕ**— ನಿನಗೆ ತೋರಿಸುವುದಿಲ್ಲ. ಆ ಕನ್ಯಕೆಯೂ ಇಲ್ಲಿಯೇ ಚಿತ್ರಿತಳಾಗಿದ್ದಾಳೆ. ಹೀಗಿರುವಾಗ, ಪಾರಿತೋಷಿಕವೇನೂ ಇಲ್ಲದೆಯೇ ಇಂತಹ ಕನ್ಯಾರತ್ನವನ್ನು ತೋರಿಸಲಾಗುತ್ತದೆಯೇ ?

84 **ರಾಜ** -- (ತನ್ನ ಕೈಯಲ್ಲಿದ್ದ ತೋಡಾವನ್ನು ಕೊಡುತ್ತಾ, ಬಲಾತ್ಕಾರವಾಗಿ ಚಿತ್ರವನ್ನೆಳೆದುಕೊಂಡು ನೋಡುತ್ತಾನೆ. ನೋಡಿ ವಿಸ್ಮಯದಿಂದ) ವಯಸ್ಯ, ನೋಡು, ನೋಡು !

85 ತನ್ನ ಲೀಲೆಯಿಂದ ಲಕ್ಷ್ಮಿಯನ್ನೂ ಮೀರಿಸಿ, ನನ್ನ ಬಗ್ಗೆ ತನ್ನ ಪಕ್ಷಪಾತವನ್ನು ತೋರಿಸುತ್ತಾ ಚಿತ್ರಗತಳಾಗಿರುವ ಈಕೆ ಯಾರು ? ನನ್ನ ಮನಸ್ಸನ್ನು ಪ್ರವೇಶಿಸುತ್ತಿದ್ದಾಳೆ; – ತನ್ನ ಲೀಲೆಯಿಂದ ಕಮಲಗಳನ್ನು ಅಲುಗಾಡಿಸಿ, ರೆಕ್ಕೆಗಳ ಬಡಿತವನ್ನು ಅಧಿಕವಾಗಿ ಪ್ರದರ್ಶಿಸುತ್ತಾ, ಚಿತ್ರ ವಿಚಿತ್ರವಾದ ನಡಗೆಯಿಂದ ರಾಜಹಂಸಿಯು ಮಾನಸಸರೋವರವನ್ನು ಪ್ರವೇಶಿಸುವಂತೆ. ||೮|| ಮತ್ತು

86 ಬ್ರಹ್ಮನು ಈಕೆಯ ಮುಖವೆಂಬ ಅಪೂರ್ವವಾದ ಪೂರ್ಣಚಂದ್ರನನ್ನು ಸೃಷ್ಟಿಸಿ, ತನ್ನ ಆಸನವಾದ (ಅರಳಿದ್ದ) ಕಮಲವು (ಆ ಚಂದ್ರನನ್ನು ಕಂಡುದರಿಂದ ಮೊಗ್ಗಾಗಿ) ಮುಚ್ಚಿಕೊಳ್ಳಲು, ನಿಜವಾಗಿಯೂ ಸರಿಯಾಗಿ ಕುಳಿತುಕೊಳ್ಳಲಾರದವನಾದನು. || ೯ ||

(ಬಳಿಕ ಸಾಗರಿಕೆ ಸುಸಂಗತೆಯುದು ಪ್ರವೇಶಿಸುತ್ತಾರೆ)

87 **ಸಾಗರಿಕೆ**— ಸಖಿ ಸುಸಂಗತೆ, ಸಾರಿಕೆ ನಮಗೆ ಸಿಕ್ಕಲಿಲ್ಲ. ಆದ್ದರಿಂದ ಚಿತ್ರಫಲಕವನ್ನಾದರೂ ಬೇಗ ಈ ಕದಳೀಗೃಹದಿಂದ ತೆಗೆದುಕೊಂಡು ಬಂದುಬಿಡೋಣ.

88 **ಸುಸಂಗತೆ**–ಗೆಳತಿ, ಹಾಗೆಯೇ ಮಾಡೋಣ (ಇಬ್ಬರೂ ಮುಂದೆ ಹೋಗುತ್ತಾರೆ)

89 **ವಿದೂಷಕ**--ವಯಸ್ಯ, ಇದೇಕೆ, ಇವಳು ಅವನತಮುಖಿಯಾಗಿ ಚಿತ್ರಿತಳಾಗಿದ್ದಾಳಲ್ಲಾ?

90 **ಸುಸಂಗತೆ**— (ಆಲಿಸಿ ಕೇಳಿ) ಗೆಳತಿ, ವಸಂತಕನು ಮಾತಾಡುತ್ತಿರುವುದರಿಂದ ಮಹಾರಾಜನೂ ಇಲ್ಲೇ ಇರಬೇಕೆಂದು ಊಹಿಸುತ್ತೇನೆ. ಆದ್ದರಿಂದ ಕದಳೀಗೃಹದ ಪೊದೆಯ ಹಿಂದೆ ಮರೆಯಾಗಿದ್ದು ನೋಡೋಣ.

(ಹಾಗೆ ಮಾಡಿ ಇಬ್ಬರೂ ಕಿವಿಗೊಟ್ಟು ಕೇಳುತ್ತಾರೆ)

91 **ರಾಜ**- ನೋಡು, ನೋಡು. ('ಬ್ರಹ್ಮನು ಈಕೆಯ.... ಇತ್ಯಾದಿ ॥ ೨' ಪುನಃ ಹೇಳುತ್ತಾನೆ)

92 **ಸುಸಂಗತೆ**—ಗೆಳತಿ, ನೀನು ಅದೃಷ್ಟಶಾಲಿ. ಈ ನಿನ್ನ ಹೃದಯವಲ್ಲಭನು ನಿನ್ನನ್ನೇ ವರ್ಣಿಸುತ್ತಿದ್ದಾನೆ.

93 **ಸಾಗರಿಕೆ**—(ಲಜ್ಜೆಯಿಂದ) ನಿನ್ನ ಪರಿಹಾಸಶೀಲತೆಯಿಂದ (ಈತನನ್ನು) ನನ್ನನ್ನು ಅಲ್ಲಗಳೆಯುವಿ ಏತಕ್ಕೆ?

94 **ವಿದೂಷಕ** — (ರಾಜನನ್ನು ಅಲುಗಾಡಿಸಿ) ಇದೇಕೆ ಇವಳು ಅವನತಮುಖಿಯಾಗಿ ಚಿತ್ರಿತಳಾಗಿದ್ದಾಳೆಂದು ನಾನು ಕೇಳಿದುದಕ್ಕೇನು ಹೇಳುತ್ತೀ?

95 **ರಾಜ**—ಮಿತ್ರ, ಸಾರಿಕೆಯೇ ಎಲ್ಲವನ್ನೂ ಹೇಳಿಬಿಟ್ಟಿದೆಯಲ್ಲಾ!

96 **ಸುಸಂಗತೆ**—(ನಕ್ಕು) ಗೆಳತಿ, ಸಾರಿಕೆಯು ತನ್ನ ಮೇಧಾವಿತ್ವವನ್ನು ಪ್ರದರ್ಶಿಸಿಬಿಟ್ಟಿದೆ.

97 **ವಿದೂಷಕ**— (ಈಕೆಯು) ನಿನ್ನ ಕಣ್ಣಿಗೆ ಆನಂದವನ್ನುಂಟುಮಾಡುತ್ತಾಳೆಯೋ, ಇಲ್ಲವೋ?

98 **ಸಾಗರಿಕೆ** — (ಸ್ವಗತ) ಇವನೇನು ಹೇಳುವನೋ? ಸತ್ಯವಾಗಿಯೂ ಸಾವು–ಜೀವಿತಗಳ ನಡುವೆ ಸಿಕ್ಕಿದ್ದೇನೆ.

99 **ರಾಜ** — ಆನಂದಪಡಿಸುತ್ತಾಳೆಯೇ ಎಂದೇಕೆ ಕೇಳುತ್ತೀ?

100 ನನ್ನ ದೃಷ್ಟಿಯು ಆಕೆಯ ತೊಡೆಗಳೆರಡರ ಮೇಲೂ ಕಷ್ಟದಿಂದ ಹಾದು, ನಿತಂಬಸ್ಥಲದಲ್ಲಿ ಸುತ್ತಿ ಸುತ್ತಿ, ವಲಿತ್ರಯಗಳಿಂದ ಒಂದೇ ಸಮನಾಗಿಲ್ಲದ ಆಕೆಯ ಮಧ್ಯಪ್ರದೇಶದಲ್ಲಿ ಎವೆಯಿಕ್ಕದೆ ನಿಂತಿದ್ದು, ಈಗ ಆಕೆಯ ಎತ್ತರವಾದ ಸ್ತನಗಳಮೇಲೆ ಮೆಲ್ಲಮೆಲ್ಲನೆ ಹತ್ತಿ ಬಾಯಾರಿಬಿಟ್ಟಿದೆಯೋ ಎಂಬಂತೆ ಕಂಬ

ನಿಗಳನ್ನು ಸುರಿಸುತ್ತಿರುವ ಆಕೆಯ ಕಣ್ಣುಗಳೆರಡನ್ನೂ ಒಲವಿನಿಂದ ಪುನಃ ಪುನಃ ನಿರೀಕ್ಷಿಸುತ್ತಿದೆ. ॥ ೧೦ ॥

101 **ಸಾಗರಿಕೆ**—(ಕೇಳಿ, ಸ್ವಗತ) ಹೃದಯವೇ, ಪ್ರಸನ್ನವಾಗು, ಪ್ರಸನ್ನವಾಗು. ಸಮಾಧಾನ ಹೊಂದು, ಸಮಾಧಾನ ಹೊಂದು. ಈಗ ನಿನ್ನ ಬಯಕೆಯಾದರೂ ಇಷ್ಟುದೂರ ಹೋಗಿತ್ತೇನು ?

102 **ಸುಸಂಗತೆ**— ಗೆಳತಿ, ಕೇಳಿದೆಯಾ ?

103 **ಸಾಗರಿಕೆ**—(ನಕ್ಕು) ನೀನೇ ಕೇಳು. ನಿನ್ನ ಚಿತ್ರಬರೆಯುವ ಸಾಮರ್ಥ್ಯವು ತಾನೇ ವರ್ಣಿತವಾಗುತ್ತಿದೆ!

104 **ವಿದೂಷಕ**—(ಚಿತ್ರ ಫಲಕವನ್ನು ಪ್ರದರ್ಶಿಸಿ ನೋಡಿ) ಯಾವ ನಿನ್ನ ಸಮಾಗಮಕ್ಕಾಗಿ ಇಂತಹ ಕನ್ಯೆಯರೂ ಬಹಳ ಆಸೆಪಡುತ್ತಿರುವರೋ, ಅಂತಹ ನಿನ್ನ ಮೇಲೆಯೇ ಔದಾಸೀನ್ಯವೇಕೆ? ಆಕೆಯಿಂದ ಚಿತ್ರಿತವಾಗಿರುವ ನಿನ್ನ ರೂಪವನ್ನೇ ನೋಡುವುದಿಲ್ಲವಲ್ಲಾ !

105 **ರಾಜ**—(ಚೆನ್ನಾಗಿ ನೋಡಿ) ವಯಸ್ಯ, ಈಕೆಯಿಂದ ಚಿತ್ರಿತನಾದವನೆಂದು ನನ್ನ ಮೇಲೆ ನನಗೇ ಸತ್ಯವಾಗಿಯೂ ಬಹುಮಾನ; ಹೀಗಿರುವಾಗ ನೋಡದಿರುವುದು ಹೇಗೆ? ನೋಡು—

106 (ನನ್ನ ರೂಪವನ್ನು) ಬರೆಯುವಾಗ ಬಿದ್ದ ಆಕೆಯ ಕಂಬನಿಯ ತುಂತುರುಗಳ ಈ ಸಮೂಹವು, (ಆಕೆಯ) ಕರಸ್ಪರ್ಶದಿಂದ ನನ್ನ ಮೈಮೇಲೆ ಬೆವರು ಮೂಡಿರುವಂತೆ ಕಾಣಿಸುತ್ತಿದೆ. ॥ ೧೧ ॥

107 **ಸುಸಂಗತೆ**— ಗೆಳತಿ, ಮಹಾರಾಜನೂ ಕೂಡ ನಿನ್ನಿಂದ ಇಷ್ಟು ಆನಂದಿತನಾಗುತ್ತಿರುವುದರಿಂದ ನೀನೇ ಧನ್ಯೆ ಮತ್ತು ಶ್ಲಾಘ್ಯೆ.

108 **ವಿದೂಷಕ**—(ಪಕ್ಕದಲ್ಲಿ ನೋಡಿ) ವಯಸ್ಯನೆ, ಇಗೋ, ರಸಭರಿತವಾದ ತಾವರೆದಳ ಮತ್ತು ದಂಟುಗಳಿಂದ ವಿರಚಿತವಾಗಿರುವ, ಆಕೆಯ ಮದನಾವಸ್ಥೆಯನ್ನು ಸೂಚಿಸುವ, ಹಾಸಿಗೆ ಕಾಣಿಸುತ್ತಿದೆ.

109 **ರಾಜ**—ಮಿತ್ರ, ಚೆನ್ನಾಗಿ ಗಮನಿಸಿದೆ. ಹಾಗೆಯೇ ಸರಿ.

110 ದಪ್ಪನಾದ ಸ್ತನ ಮತ್ತು ಜಘನಗಳ ಸಂಪರ್ಕದಿಂದ ಎರಡು ಕಡೆಯೂ ಬಾಡಿಹೋಗಿಯೂ, ಕೃಶವಾದ ಸೊಂಟದಬಳಿ ಒಳಗಡೆ ಒತ್ತುವಿಕೆಯನ್ನು ಹೊಂದದೆ ಹಸುರಾಗಿಯೂ ಮತ್ತು ಲವಲವಿಕೆಯಿಲ್ಲದ ಲತೆಯಂತಿರುವ ಭುಜ

ಗಳನ್ನೆಸೆಯುವುದು ಮತ್ತು ಬಗ್ಗಿಸುವುದರಿಂದ ಅಸ್ತವ್ಯಸ್ತವಾದ ರಚನೆಯುಳ್ಳದ್ದಾಗಿಯೂ ಇರುವ ಈ ನಳಿನೀಪತ್ರಗಳ ಹಾಸಿಗೆಯು ಆ ಕೃಶಾಂಗಿಯ ಸಂತಾಪವನ್ನು ಹೇಳುತ್ತಿದೆ. || ೧೨ || ಮತ್ತು

111 ಅತಿಶಯವಾದ ಸಂತಾಪದಿಂದ ಬಳಲಿಹೋದ ಶರೀರದ ಆಕೆಯ ಎದೆಯಮೇಲಿದ್ದ ಈ ವಿಶಾಲವಾದ ಪದ್ಮಿನೀಪತ್ರವು ತನ್ನೆರಡು ವರ್ತುಳಾಕಾರದ ಗುರುತುಗಳಮೂಲಕ, ಅವಳ ಎರಡುಸ್ತನಗಳ ವಿಸ್ತಾರವನ್ನು ತಿಳಿಸುವಷ್ಟು ಸ್ಪಷ್ಟವಾಗಿ, ಒಳಗಿನ ಮನ್ಮಥಾವಸ್ಥೆಯನ್ನು ತಿಳಿಸುತ್ತಿಲ್ಲ. || ೧೩ ||

112 **ವಿದೂಷಕ** — (ನಾಟ್ಯದಿಂದ ಮೃಣಾಲಹಾರವನ್ನೆತ್ತಿಕೊಂಡು) ವಯಸ್ಯನೇ, ಇಗೋ ಮತ್ತೊಂದು; ಆಕೆಯು ಪೀನಸ್ತನಗಳಿಂದ ಜಾರಿಬಿದ್ದು ಒಣಗುತ್ತಿರುವ ಕೋಮಲ ಮೃಣಾಲಹಾರ ದೊರೆತಿದೆ. ಅದನ್ನು ನೋಡು.

113 **ರಾಜ**—(ತೆಗೆದು ಎದೆಗೆ ಅಪ್ಪಿಕೊಂಡು, ಅದನ್ನು ಹೀಯಾಳಿಸುತ್ತಾ) ಎಲೈ ಜಡಸ್ವಭಾವವುಳ್ಳದ್ದೇ !

114 ಆಕೆಯ ಸ್ತನಕಲಶಗಳ ಮಧ್ಯಭಾಗದಿಂದ ಜಾರಿಬಂದು, ನೀನೇಕೆ ಸೊರಗುತ್ತಿದ್ದೀಯೆ ? ಎಲೈ ಮೃಣಾಲಹಾರವೇ, ನಿನ್ನ ಒಂದು ಸೂಕ್ಷ್ಮವಾದ ತಂತುವಿಗೂ ಅಲ್ಲಿ ಅವಕಾಶವಿಲ್ಲದಿರುವಾಗ, ನಿನಗೆ ಹೇಗೆತಾನೇ ದೊರಕಬಲ್ಲದು? ||೧೪

115 **ಸುಸಂಗತೆ**—(ಆತ್ಮಗತ) ಹಾ ಧಿಕ್ ! ಹಾ ಧಿಕ್ ! ತೀವ್ರವಾದ ಅನುರಾಗದಿಂದ ಮನಕಲಕಿದವನಾಗಿ ಮಹಾರಾಜನು ಅಸಂಬದ್ಧವಾಗಿಯೂ ಮಾತಾಡಲಾರಂಭಿಸಿರುವನಲ್ಲಾ ! ಆದ್ದರಿಂದ ನಾನು ಇನ್ನು ಮುಂದೆ ಉಪೇಕ್ಷಿಸುವುದು ಸರಿಯಲ್ಲ. (ಪ್ರಕಾಶ)ಸಖಿ, ಯಾರಿಗಾಗಿ ನೀನು ಬಂದೆಯೋ, ಅಗೋ, ಎದುರಿಗೇ ಇದ್ದಾನೆ.

116 **ಸಾಗರಿಕೆ**—(ಅಸೂಯೆಯಿಂದ) ಯಾರಿಗಾಗಿ ನಾನು ಬಂದೆ ?

117 **ಸುಸಂಗತೆ** — (ನಕ್ಕು) ಎಲೈ ಬೇರೆ ಏನನ್ನೋ ಶಂಕಿಸುತ್ತಿರುವವಳೇ, ಚಿತ್ರಫಲಕಕ್ಕಾಗಿ (ಬರಲಿಲ್ಲವೇ) ? ಆದ್ದರಿಂದ ಅದನ್ನು ತೆಗೆದುಕೋ.

118 **ಸಾಗರಿಕೆ**— (ರೋಷದಿಂದ) ಲೇ, ಈ ಬಗೆಯಾಗಿ ಮಾತಾಡಲು ನಾನು ನಿಪುಣಳಲ್ಲ. ಆದ್ದರಿಂದ ಬೇರೆ ಕಡೆ ಹೋಗುವೆನು. (ಹೋಗಲು ಹೊರಡುತ್ತಾಳೆ)

119 **ಸುಸಂಗತೆ**—ಅಸಹನಶೀಲಳೇ ! ಇಲ್ಲೇ ಸ್ವಲ್ಪ ನಿಲ್ಲು. ಕದಳೀಗೃಹದಿಂದ ಚಿತ್ರಫಲಕವನ್ನು ತೆಗೆದುಕೊಂಡುಬರುತ್ತೇನೆ.

120 **ಸಾಗರಿಕೆ**— ಸಖಿ, ಹಾಗೆಯೇ ಮಾಡು. (ಸುಸಂಗತೆ ಕದಳೀಗೃಹದ ಕಡೆ ಹೋಗುತ್ತಾಳೆ.)

121 **ವಿದೂಷಕ**— (ಸುಸಂಗತೆಯನ್ನು ಕಂಡು, ಸಂಭ್ರಮದಿಂದ) ವಯಸ್ಯ ಈ ಬಾಳೆಯೆಲೆಯಿಂದ ಈ ಚಿತ್ರಫಲಕವನ್ನು ಮುಚ್ಚು. ಇಗೋ, ಮಹಾರಾಣಿಯ ಪರಿಚಾರಿಕೆ ಸುಸಂಗತೆ ಬಂದುಬಿಟ್ಟಿದ್ದಾಳೆ (ರಾಜನು ಚಿತ್ರಫಲಕವನ್ನು ಮುಚ್ಚುತ್ತಾನೆ)

122 **ಸುಸಂಗತೆ**— (ಹತ್ತಿರಕ್ಕೆ ಹೋಗಿ) ಮಹಾರಾಜನಿಗೆ ಜಯವಾಗಲಿ !

123 **ರಾಜ**— ಸುಸಂಗತೆ, ಸ್ವಾಗತ; ಇಲ್ಲಿ ಕುಳಿತುಕೊ. (ಸುಸಂಗತೆ ಕುಳಿತು ಕೊಳ್ಳುತ್ತಾಳೆ) ಸುಸಂಗತೆ; ನಾನಿಲ್ಲಿರುವುದು ನಿನಗೆ ಹೇಗೆ ತಿಳಿಯಿತು ?

124 **ಸುಸಂಗತೆ** — (ನಕ್ಕು) ಮಹಾರಾಜನು (ಇಲ್ಲಿರುವುದು) ಮಾತ್ರವಲ್ಲ; ಚಿತ್ರಫಲಕವೂ ಸೇರಿ ಎಲ್ಲಾ ವೃತ್ತಾಂತವೂ ನನಗೆ ತಿಳಿದಿದೆ. ಆದ್ದರಿಂದ ಹೋಗಿ ಮಹಾರಾಣಿಗೆ ಅರಿಕೆ ಮಾಡುತ್ತೇನೆ. (ಹೋಗಲು ಇಚ್ಛಿಸುತ್ತಾಳೆ)

125 **ವಿದೂಷಕ** — (ಏಕಾಂತವಾಗಿ ಭಯದಿಂದ) ಎಲ್ಲವೂ, ಸಾಧ್ಯ. ಈ ಗರ್ಭ ದಾಸಿ ಬಾಯಿಬಡಕಿಯೇ. ಆದ್ದರಿಂದ ಇವಳನ್ನು ಸಂತೋಷಪಡಿಸು.

126 **ರಾಜ**— ನೀನು ಸರಿಯಾಗಿ ಹೇಳಿದೆ. (ಸುಸಂಗತೆಯನ್ನು ಕೈಯಲ್ಲಿ ಹಿಡಿದು ಕೊಂಡು) ಸುಸಂಗತೆ, ಇದು ಬರೀ ಆಟ ಮಾತ್ರ. ನಿಷ್ಕಾರಣವಾಗಿ ದೇವಿಯನ್ನು ವ್ಯಥೆಗೀಡುಮಾಡಬೇಡ. ಇಗೋ, ನಿನಗೆ ಪಾರಿತೋಷಿಕ. (ಕಿವಿಯ ಆಭರಣ ವನ್ನು ಕೊಡ ಹೋಗುತ್ತಾನೆ)

127 **ಸುಸಂಗತೆ**— (ಸ್ವಗತ) ಮಹಾರಾಜನು ಪ್ರಸನ್ನನಾಗಿದ್ದಾನೆ. (ಪ್ರಕಾಶ) ಶಂಕಿಸಬೇಕಾಗಿಲ್ಲ. ಮಹಾರಾಜನ ಪ್ರಸನ್ನತೆಯಿಂದ ನಾನೂ ಆಟವಾಡಿದೆ. ಆದ್ದರಿಂದ ಈ ಕರ್ಣಾಭರಣ ಏಕೆ ? 'ನೀನು ನನ್ನನ್ನೇಕೆ ಚಿತ್ರಿಸಿದೆ' ಎಂದು ನನ್ನ ಪ್ರಿಯಸಖಿ ಸಾಗರಿಕೆ ಕೋಪಿಸಿ ಕೊಂಡಿದ್ದಾಳೆ; ಅವಳಲ್ಲಿಗೆ ಬಂದು ಮಹಾರಾಜರು ಅವಳನ್ನು ಪ್ರಸನ್ನಳಾಗುವಂತೆ ಮಾಡಲಿ;—ಅದೇ ನನಗೆ ವಿಶೇಷವಾದ ಪ್ರಸಾದ.

128 **ರಾಜ**—(ಕೂಡಲೇ ಎದ್ದು ನಿಂತು) ಸುಸಂಗತೆ; ಅವಳೆಲ್ಲಿ ?

129 **ಸುಸಂಗತೆ** — ಮಹಾರಾಜ, ಇಗೋ ಬಾಳೆಯ ಪೊದೆಯ ಹಿಂದೆ ಮರೆಯಾಗಿ ನಿಂತಿದ್ದಾಳೆ.

130 **ರಾಜ**—ದಾರಿ ತೋರಿಸು.

131 **ಸುಸಂಗತೆ**—ಈಕಡೆ; ಈಕಡೆ.

132 **ವಿದೂಷಕ**— ಅಯ್ಯೋ, ಈ ಚಿತ್ರಫಲಕವನ್ನು ತೆಗೆದು ಕೊಳ್ಳುತ್ತೇನೆ. ಇದರಿಂದ ಪ್ರಯೋಜನವುಂಟು. (ಎಂದು ಹಾಗೆಯೇ ಮಾಡುತ್ತಾನೆ)

(ಎಲ್ಲರೂ ಕದಳೀಗೃಹದಿಂದ ಹೊರಡುತ್ತಾರೆ)

133 **ಸಾಗರಿಕೆ**—(ರಾಜನನ್ನು ಕಂಡು ಹರ್ಷದಿಂದಲೂ, ಹೆದರಿಕೆಯಿಂದಲೂ, ನಡುಕದಿಂದಲೂ ಸ್ವಗತ) ಹಾ ಧಿಕ್ ! ಹಾ ಧಿಕ್ ! ಇವನನ್ನು ಕಂಡು ಅತಿಯಾದ ಹೆದರಿಕೆಯಿಂದ ಒಂದು ಹೆಜ್ಜೆಯನ್ನೂ ಕೂಡ ಇಡಲಾರದಾಗಿದ್ದೇನೆ. ಆದ್ದರಿಂದ, ಈಗ ಏನು ಮಾಡಲಿ ?

134 **ವಿದೂಷಕ** — (ಸಾಗರಿಕೆಯನ್ನು ಕಂಡು) ಹೀ ಹೀ ಭೋ! ಆಶ್ಚರ್ಯ! ಈ ವಿಧವಾದ ಕನ್ಯಾರತ್ನ ಮನುಷ್ಯಲೋಕದಲ್ಲೆಲ್ಲೂ ಕಾಣಿಸದು. ಆದ್ದರಿಂದ ಈ ರತ್ನವನ್ನು ನಿರ್ಮಿಸಿದ ಬ್ರಹ್ಮನಿಗೇ ವಿಸ್ಮಯವುಂಟಾಗಿರಬೇಕೆಂದು ಊಹಿಸುತ್ತೇನೆ.

135 **ರಾಜ** — ವಯಸ್ಯ, ನನ್ನ ಮನಸ್ಸಿಗೂ ಹಾಗೆಯೇ ತೋರುತ್ತೆ.

136 ಮೂರು ಲೋಕಗಳಿಗೂ ಆಭರಣಪ್ರಾಯಳಾಗಿರುವ ಈ ಲಲನೆಯನ್ನು ಸೃಷ್ಟಿಸಿ ನಿಶ್ಚಯವಾಗಿಯೂ ವಿಸ್ಮಯದಿಂದ ಬ್ರಹ್ಮನ ಕಣ್ಣುಗಳು,–ತನ್ನ (ಆಸನವಾದ) ಕಮಲದ ದಳದ ಕಾಂತಿಯನ್ನೂ ಮೀರಿರುವ ಕಣ್ಣುಗಳು,—ಇನ್ನೂ ಹೆಚ್ಚು ವಿಶಾಲವಾದುವು; ನಾಲ್ಕು ಮುಖಗಳೂ ಒಟ್ಟಿಗೇ ಭಲೆ! ಭಲೆ! ಎಂದು ಉಚ್ಚರಿಸಿದುವು; ಮತ್ತು ತಲೆಗಳೂ (ಮೆಚ್ಚಿಗೆಯಿಂದ) ತೂಗಿದುವು. || ೧೫ ||

137 **ಸಾಗರಿಕೆ**—(ಅಸೂಯೆಯಿಂದ ಸುಸಂಗತೆಯನ್ನು ನೋಡಿ)ಸಖಿ, ಈ ಬಗೆಯ ಚಿತ್ರಫಲಕವನ್ನು ತಾನೆ ನೀ ತಂದಿರುವುದು ? (ಹೋಗಲು ಇಚ್ಛಿಸುತ್ತಾಳೆ)

138 **ರಾಜ**— ಎಲೈ ಭಾಮಿನಿ, ನೀನು ಕೋಪದಿಂದಲೇ ಈ ನೋಟವನ್ನು ಬೀರಿದರೂ, ಅದು ಮಾತ್ರ ಸ್ವಭಾವತಃ ಸ್ನೇಹಮಯವಾಗಿರುವುದರಿಂದ ರೂಕ್ಷಭಾವವನ್ನು ಹೊಂದುವುದಿಲ್ಲ. ಆತುರವನ್ನು ಬಿಟ್ಟು (ಮೆಲ್ಲಮೆಲ್ಲನೆ)ನಡೆ. ಎಡವುವ ನಡಗೆಯಿಂದ ಈ ನಿನ್ನ ಭಾರವಾದ ನಿತಂಬಕ್ಕೆ ನೋವುಂಟಾಗುವುದು. ೧೬

139 **ಸುಸಂಗತೆ**— ಮಹಾರಾಜ, ಈಕೆ ತುಂಬಾ ಕೋಪಿಷ್ಠೆ. ಆದ್ದರಿಂದ ಕೈ ಹಿಡಿದು ಈಕೆಯನ್ನು ಸಂತೈಸು.

140 **ರಾಜ** — (ಆನಂದದಿಂದ) ನೀನು ಹೇಳಿದಂತೆಯೇ ಆಗಲಿ. (ಸಾಗರಿಕೆಯ **ಕೈಹಿಡಿದು, ಸ್ಪರ್ಶಸುಖವನ್ನು** ನಟಿಸುತ್ತಾನೆ)

141 **ವಿದೂಷಕ**— ಅಯ್ಯಾ, ನಿಜವಾಗಿಯೂ ಈಗ ನಿನಗೆ ದೊರೆತಿರುವುದು ಅಪೂರ್ವವಾದ ಶ್ರೀ.

142 **ರಾಜ**—ವಯಸ್ಯ, ನಿಜ.

143 ಈಕೆ ಶ್ರೀದೇವಿಯೇ; ಇವಳ ಕೈಯೂ ಪಾರಿಜಾತದ ಚಿಗುರೇ. ಹಾಗಲ್ಲದಿದ್ದರೆ ಬೆವರಿನ ರೂಪದಿಂದ ಈ ಅಮೃತದ್ರವವು ಹೇಗೆ ತಾನೆ ಜಿನುಗಿ ಬೀಳುವುದು? || ೧೭ ||

144 **ಸುಸಂಗತೆ**—ಸಖಿ, ಈಗ ನೀನು ತುಂಬಾ ನಿಷ್ಠುರಳಾಗಿಬಿಟ್ಟಿದ್ದೀಯೆ; ಯಜಮಾನನೇ ಈರೀತಿ ನಿನ್ನ ಕೈಹಿಡಿದಿದ್ದರೂ ನೀನು ಕೋಪ ಬಿಡುವುದೇ ಇಲ್ಲವಲ್ಲಾ!

145 **ಸಾಗರಿಕೆ**— (ಹುಬ್ಬು ಗಂಟಿಕ್ಕಿ) ಸುಸಂಗತೆ, ಇನ್ನೂ ಸುಮ್ಮನಾಗುವುದಿಲ್ಲವೇ ?

146 **ರಾಜ**—ಪ್ರಿಯೆ ಸಾಗರಿಕೆ, ಸಖಿಯರ ವಿಷಯದಲ್ಲಿ ಹೀಗೆ ಒಂದೇ ಸಮನೆ ಕೋಪಮಾಡುವುದು ಸರಿಯಲ್ಲ.

147 **ವಿದೂಷಕ**— ಪೂಜ್ಯಳೇ, ಹಸಿದ ಬ್ರಾಹ್ಮಣನಂತೆ ಇದೇಕೆ ಕೋಪಿಸಿಕೊಳ್ಳುತ್ತಿದ್ದೀಯೆ ?

148 **ಸುಸಂಗತೆ**—ಸಖಿ, ನಿನ್ನ ಜತೆಯಲ್ಲಿ ನಾನು ಮಾತಾಡುವುದಿಲ್ಲ.

149 **ರಾಜ**—ಎಲ್ಲೈ ಕೋಪಿಷ್ಠೆ! ಸಮಾನ ಅಂತಸ್ತಿನ ಸಖಿಯರಲ್ಲಿ ಇದು ಸರಿಯಲ್ಲ.

150 **ವಿದೂಷಕ**—ಇಗೋ, ಇಲ್ಲಿ ಬೇರೆ ದೇವಿ ವಾಸವದತ್ತೆ!

(ರಾಜನು ಹೆದರಿಕೆಯಿಂದ ಸಾಗರಿಕೆಯ ಕೈಯನ್ನು ಬಿಟ್ಟುಬಿಡುತ್ತಾನೆ)

151 **ಸಾಗರಿಕೆ**—(ಸಂಭ್ರಮದಿಂದ) ಸುಸಂಗತೆ, ಈಗೇನು ಮಾಡಲಿ ?

152 **ಸುಸಂಗತೆ**—ಸಖಿ, ಈ ತಮಾಲವೃಕ್ಷದ ಮರೆಯಿಂದ ಈಕಡೆ ಹೊರಟು ಹೋಗೋಣ. (ಇಬ್ಬರೂ ಹೊರಟು ಹೋಗುತ್ತಾರೆ)

153 **ರಾಜ**—(ಸುತ್ತಲೂ ನೋಡಿ) ಎಲ್ಲಿ ದೇವೀ ವಾಸವದತ್ತೆ ?

151 **ವಿದೂಷಕ**—ಹಾಗಲ್ಲವಯ್ಯಾ ! ಅತಿದೀರ್ಘವಾದ ಕೋಪದಿಂದ ಆಕೆ ಬೇರೊಬ್ಬ ವಾಸವದತ್ತೆಯೇ, ಎಂದು ನಾನು ಹೇಳಿದ್ದು.

155 **ರಾಜ**—ಛಿಃ ಮೂರ್ಖ !

156 ಅದೃಷ್ಟವಶದಿಂದ ಹೇಗೋ ದೊರೆತಿದ್ದು, ಬಹಿರಂಗವಾಗಿ ಪ್ರಕಟಿತವಾದ ಅನುರಾಗವುಳ್ಳ ಆ ಕಾಂತೆಯು ನಿನ್ನಿಂದ ನನ್ನ ಕೈತಪ್ಪಿ ಹೋದಳು;— ಅದೃಷ್ಟದಿಂದ ಹೇಗೋ ದೊರೆತು ಸ್ಪಷ್ಟವಾಗಿ ಕಾಣಿಸುವ ಬಣ್ಣದ ಹೊಳಪುಳ್ಳ ರತ್ನಾವಳಿಯು ಕೈತಪ್ಪಿದಂತೆ. || ೧೨ ||

(ಬಳಿಕ ವಾಸವದತ್ತೆಯೂ ಕಾಂಚನಮಾಲೆಯೂ ಪ್ರವೇಶಿಸುತ್ತಾರೆ)

157 **ವಾಸವದತ್ತೆ**— ಹಂಜೆ ಕಾಂಚನಮಾಲೆ, ಆರ್ಯಪುತ್ರನಿಂದ ಪರಿಗೃಹೀತವಾಗಿರುವ ಆ ನವಮಾಲಿಕೆ ಇನ್ನೂ ಎಷ್ಟು ದೂರದಲ್ಲಿದೆ ?

158 **ಕಾಂಚನಮಾಲೆ**— ಇಗೋ ಈ ಕದಳೀಗೃಹದ ಆಚೆ ಕಡೆ ಕಾಣುತ್ತಿದೆ.

159 **ವಾಸವದತ್ತೆ** — ಹಾಗಾದರೆ, ದಾರಿ ತೋರಿಸು; ಅಲ್ಲಿಗೇ ಹೋಗೋಣ.

160 **ಕಾಂಚನಮಾಲೆ**— ಹಾಗಾದರೆ ಭಟ್ಟಿಣಿಯು ಈಕಡೆ ಬರೋಣವಾಗಲಿ. (ಇಬ್ಬರೂ ಮುಂದೆ ಸಾಗುತ್ತಾರೆ)

161 **ರಾಜ**— ವಯಸ್ಯ, ಈಗ ಪ್ರಿಯತಮೆಯನ್ನು ಎಲ್ಲಿ ಕಾಣುವುದು ?

162 **ಕಾಂಚನಮಾಲೆ**— ಭಟ್ಟಿಣಿ, ಸಮೀಪದಲ್ಲೇ ಯಜಮಾನರು ಮಾತಾಡುತ್ತಿರುವುದರಿಂದ ಭಟ್ಟಿಣಿಯವರನ್ನೇ ಇದಿರು ನೋಡುತ್ತಿದ್ದಾರೆಂದೂಹಿಸುತ್ತೇನೆ. ಆದ್ದರಿಂದ ಭಟ್ಟಿಣಿಯವರು ಹತ್ತಿರ ಹೋಗೋಣವಾಗಲಿ.

163 **ವಾಸವದತ್ತೆ**—(ಹತ್ತಿರ ಹೋಗಿ) ಆರ್ಯಪುತ್ರನಿಗೆ ಜಯವಾಗಲಿ ?

164 **ವಿದೂಷಕ**—(ಕಂಕುಳಿನಲ್ಲಿ ಚಿತ್ರಫಲಕವನ್ನಿಟ್ಟುಕೊಂಡು, ಉತ್ತರೀಯದಿಂದ ಮುಚ್ಚಿಕೊಳ್ಳುತ್ತಾನೆ) ಇಗೋ ದೇವಿ ಬಂದೇ ಬಿಟ್ಟಳಲ್ಲಾ !

165 **ರಾಜ** — (ಏಕಾಂತವಾಗಿ) ವಯಸ್ಯ, ಚಿತ್ರಫಲಕವನ್ನು ಮುಚ್ಚಿಕೊ. (ಪ್ರಕಾಶ) ದೇವಿ, ಸ್ವಾಗತ; ಇಲ್ಲಿ ಕುಳಿತುಕೊ.

166 **ವಾಸವದತ್ತೆ**— (ಕುಳಿತು) ಆರ್ಯಪುತ್ರ, ನವಮಾಲಿಕೆಯು ಸತ್ಯವಾಗಿಯೂ ಹೂ ಬಿಟ್ಟಿದೆಯೇ ?

167 **ರಾಜ**— (ನಗುತ್ತಾ) ದೇವಿ, ಮೊದಲೇ ಬಂದ ನಾವು, ನೀನು ಸಾವಕಾಶ ಮಾಡಿದುದರಿಂದ ನೋಡಲಿಲ್ಲ. ಆದ್ದರಿಂದ ಬಾ; ಒಟ್ಟಿಗೇ ಅದನ್ನು ನೋಡೋಣ.

168 **ವಾಸವದತ್ತೆ**— (ಗಮನಿಸಿ ನೋಡಿ) ಆರ್ಯಪುತ್ರ, ನಿನ್ನ ಮುಖದ ಕಳೆಯಿಂದಲೇ ನವಮಾಲಿಕೆ ಕುಸುಮಿತವಾಗಿದೆಯೆಂಬುದು ತಿಳಿಯಿತು. ಆದ್ದರಿಂದ ಹೋಗುವೆನು.

169 **ವಿದೂಷಕ**—ಪೂಜ್ಯಳೇ, ಹಾಗಾದರೆ ನಾವು ಗೆದ್ದೆವು. (ಎಂದು ಹೇಳಿ ಎರಡು ತೋಳುಗಳನ್ನೂ ಚಾಚಿ ಕುಣಿಯುತ್ತಾನೆ. ಕಂಕುಳಿನಿಂದ ಚಿತ್ರಫಲಕ ಬೀಳುತ್ತದೆ. ಅದನ್ನು ಕಂಡು ವಿಷಾದವನ್ನು ನಟಿಸುತ್ತಾನೆ. ರಾಜನು ಏಕಾಂತವಾಗಿ ಬೆರಳಿನಿಂದ ತೋರಿಸುತ್ತಾ ವಸಂತಕನ ಮುಖವನ್ನು ನೋಡುತ್ತಾನೆ. ಏಕಾಂತವಾಗಿ) ಅಯ್ಯಾ, ಕೋಪಿಸಬೇಡ. ನೀನು ಸುಮ್ಮನಿರು. ಏನು ಮಾಡಬೇಕೆಂಬುದನ್ನು ನಾನೇ ಬಲ್ಲೆ.

170 **ಕಾಂಚನಮಾಲೆ**—(ಚಿತ್ರಫಲಕವನ್ನೆತ್ತಿಕೊಂಡು) ಭಟ್ಟಿಣಿ, ಸ್ವಲ್ಪನೋಡು ಈ ಚಿತ್ರಫಲಕದಲ್ಲಿ ಏನು ಬರೆದಿದೆ.

171 **ವಾಸವದತ್ತೆ**—(ಗಮನಿಸಿ ನೋಡಿ, ಸ್ವಗತ) ಈತ ಆರ್ಯಪುತ್ರ. ಈಕೆಯಂತು ಸಾಗರಿಕೆಯೇ! (ಪ್ರಕಾಶ, ರಾಜನನ್ನು ಕುರಿತು) ಆರ್ಯಪುತ್ರ, ಇದೇನು?

172 **ರಾಜ**—(ಪೇಚಾಟದಿಂದ ನಗುತ್ತಾ, ಏಕಾಂತವಾಗಿ) ವಯಸ್ಯ, ಏನು ಹೇಳುತ್ತೀ?

173 **ವಿದೂಷಕ**—ಯೋಚಿಸಬೇಡವಯ್ಯಾ, ನಾನು ಉತ್ತರ ಕೊಡುತ್ತೇನೆ. (ಪ್ರಕಾಶ, ವಾಸವದತ್ತೆಯನ್ನು ಕುರಿತು) ನಮ್ಮನ್ನು ನಾವೇ ಚಿತ್ರಿಸುವುದು ಕಷ್ಟ—ಎಂಬ ನನ್ನ ಮಾತನ್ನು ಕೇಳಿ, ಪ್ರಿಯವಯಸ್ಯನು ಈ ತನ್ನ ವಿಜ್ಞಾನವನ್ನು ತೋರಿಸಿದನು.

174 **ರಾಜ**—ವಸಂತಕನು ಹೇಳಿದಂತೆಯೇ ಇದು (ನಡೆದದ್ದು).

175 **ವಾಸವದತ್ತೆ**—(ಚಿತ್ರಫಲಕವನ್ನು ತೋರಿಸಿ) ಆರ್ಯಪುತ್ರ, ಈ ಇನ್ನೊಬ್ಬಳು,—ನಿನ್ನ ಸಮೀಪದಲ್ಲಿ ಚಿತ್ರಿತಳಾಗಿರುವವಳು,— ಅದೇನು ವಸಂತಕನ ವಿಜ್ಞಾನವೋ?

176 **ರಾಜ**—(ಪೇಚಾಟದಿಂದ ಕೂಡಿದ ನಗು ನಗುತ್ತಾ) ದೇವಿ, ಬೇರೆ ವಿಧವಾಗಿ ಶಂಕಿಸಬೇಡ. ಈ ಕನ್ನಿಕೆಯನ್ನು ನಾನೇ ಮನಸ್ಸಿನಲ್ಲಿ ಕಲ್ಪಿಸಿಕೊಂಡು ಚಿತ್ರಿಸಿದ್ದು; ಈವರೆಗೆ ಯಾವಾಗಲೂ ಕಂಡವಳಲ್ಲ.

177 **ವಿದೂಷಕ**— ನನ್ನ ಬ್ರಹ್ಮಸೂತ್ರ ಹಿಡಿದು ಆಣೆಯಿಟ್ಟುಕೊಳ್ಳುತ್ತೇನೆ. ಈ ಬಗೆಯವಳನ್ನು ಈ ವರೆಗೆ ಯಾವಾಗಲೂ ನಾವು ಕಂಡಿಲ್ಲ.

178 **ಕಾಂಚನಮಾಲೆ**—(ಏಕಾಂತವಾಗಿ) ಭಟ್ಟಿಣಿ, ಈ ರೀತಿ ಘುಣಾಕ್ಷರ ಸಂಭವಿಸುವುದೂ ಉಂಟು. ಆದ್ದರಿಂದ ಕೋಪ ಸಾಕು.

179 **ವಾಸವದತ್ತೆ**—(ಏಕಾಂತವಾಗಿ) ಅಯ್ಯೋ ಬೆಪ್ಪಿ! ಇವನ ಡೊಂಕುಮಾತುಗಳು ನಿನಗೆ ಗೊತ್ತಿಲ್ಲ. ವಸಂತಕನಲ್ಲವೇ ಇವನು! (ಪ್ರಕಾಶ, ರಾಜನನ್ನು ಕುರಿತು) ಆರ್ಯಪುತ್ರ, ನನಗಂತೂ ಈ ಚಿತ್ರವನ್ನು ನೋಡಿ ತಲೆನೋವುಂಟಾಗಿದೆ. ಆದ್ದರಿಂದ

ಆರ್ಯಪುತ್ರನು ಸುಖವಾಗಿರಲಿ. ನಾನು ಹೋಗುತ್ತೇನೆ. (ಎಂದು ಎದ್ದು ಹೋಗ ತೊಡಗುತ್ತಾಳೆ)

180 **ರಾಜ**—(ಸೆರಗಿನ ತುದಿ ಹಿಡಿದುಕೊಂಡು) ದೇವಿ!

181 'ಪ್ರಸನ್ನಳಾಗು' ಎಂದು ಹೇಳೋಣವೆಂದರೆ ಕೋಪವಿಲ್ಲದಿದ್ದರೆ ಅದು ಸರಿಹೊಂದುವುದಿಲ್ಲ. 'ಪುನಃ ಹೀಗೆ ಮಾಡುವುದಿಲ್ಲ' ಎಂದು ಹೇಳೋಣವೆಂದರೆ (ಈಗ ಮಾಡಿರುವುದು ತಪ್ಪೆಂದು) ಒಪ್ಪಿಕೊಂಡಂತಾಗುವುದು. 'ನನ್ನದೇನೂ ತಪ್ಪಿಲ್ಲ' ಎಂದು ಹೇಳೋಣವೆಂದರೆ, ಅದು ಸುಳ್ಳೆಂದು ನೀನು ತಿಳಿಯುತ್ತೀ. ಈ ವಿಷಯದಲ್ಲಿ ಏನು ಹೇಳುವುದು ಸರಿಯೆಂಬುದೇ ನನಗೆ ಗೊತ್ತಾಗದೆ ಇದೆ, ಪ್ರಿಯತಮಳಾದವಳೇ ! ॥ ೧೯ ॥

182 **ವಾಸವದತ್ತೆ**—(ವಿನಯದಿಂದ ಸೆರಗಿನ ತುದಿಯನ್ನು ಎಳೆದುಕೊಂಡು) ಆರ್ಯಪುತ್ರ, ಬೇರೆ ಭಾವಿಸ ಬೇಡ. ಸತ್ಯವಾಗಿಯೂ ನನಗೆ ತಲೆ ನೋಯುತ್ತಿದೆ. ಆದ್ದರಿಂದ ಹೋಗುತ್ತೇನೆ. (ಇಬ್ಬರೂ ಹೊರಟು ಹೋಗುತ್ತಾರೆ)

183 **ವಿದೂಷಕ**— ನಿನ್ನ ಅದೃಷ್ಟ ಒಳ್ಳೆಯದಯ್ಯಾ! ವಾಸವದತ್ತೆ ಕ್ಷೇಮವಾಗಿ ಹೊರಟುಹೋದಳು, ಅಕಾಲದ ಸುಂಟರಗಾಳಿಯಂತೆ.

184 **ರಾಜ**—ಛಿ ಮೂರ್ಖ! ನಿನ್ನ ಸಂತೋಷ ಸಾಕು. ದೇವಿಯು ಹೊರಟು ಹೋಗುವಾಗ ಒಳಗೇ ಅಡಗಿಸಿಕೊಂಡಿದ್ದ ದೃಢವಾದ ಕೋಪವನ್ನು ನೀನು ಗಮನಿಸಲಿಲ್ಲ. ನೋಡು—

185 ಇದ್ದಕ್ಕಿದ್ದಂತೆ ಹುಬ್ಬುಗಂಟುಕಟ್ಟಿದ್ದರೂ ಮುಖ ಮಾತ್ರ ತುಂಬಾ ನಮ್ರವಾಗಿತ್ತು. ಒಳನಾಟುವ ನಗುವನ್ನು ಸ್ವಲ್ಪ ನನ್ನ ಕಡೆ ಬೀರಿದರೂ ನಿಷ್ಠುರವಾದ ಒಂದು ಮಾತನ್ನೂ ಆಡಲಿಲ್ಲ. ಕಂಬನಿಯ ಹಬೆಯಿಂದ ಕಣ್ಣುಗಳು ಒಳಗೇ ಜಡವಾಗಿಹೋಗಿದ್ದರೂ, ಸಂಯಮವಿದ್ದುದರಿಂದ ವಿಶಾಲವಾಗಿ ತೆರೆಯಲೇ ಇಲ್ಲ. ನನ್ನ ಪ್ರಿಯೆಯಿಂದ ಕೋಪವೇನೋ ಪ್ರಕಟಿತವಾಯಿತು; ಆದರೂ ವಿನಯಶೀಲತೆಯು ಮಾತ್ರ ಬಿಡಲ್ಪಡಲಿಲ್ಲ. ॥ ೨೦ ॥

186 **ವಿದೂಷಕ** — ದೇವೀ ವಾಸವದತ್ತೆ ಹೊರಟುಹೋದಳು. ನೀನೇಕೆ ಸುಮ್ಮನೆ ಅರಣ್ಯರೋದನ ಮಾಡುತ್ತೀಯೆ?

187 **ರಾಜ**—ಹಾಗಾದರೆ ಬಾ. ದೇವಿಯನ್ನು ಸಂತೈಸಲು ಅರಮನೆಯೊಳಕ್ಕೇ ಹೋಗೋಣ. (ಇಬ್ಬರೂ ಹೋಗುತ್ತಾರೆ)

**ಇಂತು ಕದಳೀಗೃಹವೆಂಬ ಎರಡನೆಯ ಅಂಕ**

# ಅಂಕ ೩

(ಬಳಿಕ ಮದನಿಕೆ ಪ್ರವೇಶಿಸುತ್ತಾಳೆ)

1 **ಮದನಿಕೆ**— (ಆಕಾಶದಲ್ಲಿ) ಕೌಶಾಂಬಿಕೆ, ಮಹಾರಾಜನ ಬಳಿ ಕಾಂಚನ ಮಾಲೆಯು ನಿನಗೇನಾದರೂ ಕಂಡು ಬಂದಳೇ? (ಕಿವಿಗೊಟ್ಟು ಕೇಳಿ) ಏನು ಹೇಳುತ್ತೀ?–ಆಕೆಯು ಬಂದುಹೋಗಿ ಎಷ್ಟೋ ಹೊತ್ತಾಯಿತು, ಎನ್ನುತ್ತೀಯಾ? ಹಾಗಾದರೆ ಈಗೆಲ್ಲಿ ಕಾಣುವುದು ? (ಮುಂದೆ ನೋಡಿ) ಇದೇನಿದು ಈ ಕಾಂಚನ ಮಾಲೆ ಈ ಕಡೆಯೇ ಬರುತ್ತಿದ್ದಾಳೆ! ಹತ್ತಿರಕ್ಕೆ ಹೊಗುತ್ತೇನೆ.

(ಬಳಿಕ ಕಾಂಚನಮಾಲೆ ಪ್ರವೇಶಿಸುತ್ತಾಳೆ.)

2 **ಕಾಂಚನಮಾಲೆ**–(ವ್ಯಂಗ್ಯವಾಗಿ) ಭಲೆ ವಸಂತಕ, ಭಲೆ! ಈ ಸಂಧಿವಿಗ್ರಹ ಚಿಂತೆಯಿಂದ ನೀನು ಅಮಾತ್ಯ ಯೌಗಂಧರಾಯಣನನ್ನೂ ಮೀರಿಸಿದ್ದೀಯೆ!

3 **ಮದನಿಕೆ**— (ನಗುತ್ತಾ ಹತ್ತಿರ ಹೋಗಿ) ಸಖಿ ಕಾಂಚನಮಾಲೆ, ವಸಂತಕ ಈ ದಿನ ಮಾಡಿದ್ದೇನು, ಅವನನ್ನು ಈ ರೀತಿ ಶ್ಲಾಘಿಸುತ್ತೀಯಲ್ಲಾ!

4 **ಕಾಂಚನಮಾಲೆ**—ಮದನಿಕೆ, ಈ ಮಾತನ್ನು ಕೇಳಿ ನಿನಗೇನು ಪ್ರಯೋಜನ? ಈ ರಹಸ್ಯವನ್ನು ಕಾಪಾಡಲು ನಿನ್ನಿಂದ ಸಾಧ್ಯವಿಲ್ಲ.

5 **ಮದನಿಕೆ**— ಮಹಾರಾಣಿಯವರ ಪಾದಗಳ ಆಣೆ, ನಾನು ಯಾರ ಮುಂದಾದರೂ ಪ್ರಕಾಶ ಪಡಿಸಿದರೆ.

6 **ಕಾಂಚನಮಾಲೆ** — ಹಾಗಾದರೆ ಕೇಳು, ಹೇಳುತ್ತೇನೆ. ಈದಿನ ಅರಮನೆ ಯಿಂದ ಹಿಂದಿರುಗುತ್ತಿದ್ದಾಗ, ಚಿತ್ರಶಾಲೆಯ ಬಾಗಿಲಿನಲ್ಲಿ ವಸಂತಕ ಸುಸಂಗತೆ ಯೊಡನೆ ಮಾತಾಡುತ್ತಿದ್ದುದು ಕೇಳಿಬಂತು.

7 **ಮದನಿಕೆ**— (ಕುತೂಹಲದಿಂದ) ಸಖಿ, ಏನೆಂದು?

8 **ಕಾಂಚನಮಾಲೆ** — ಹೀಗೆ — 'ಸುಸಂಗತೆ, ನನ್ನ ಪ್ರಿಯವಯಸ್ಯನ ಅಸ್ವಸ್ಥತೆಗೆ ಕಾರಣ ಸಾಗರಿಕೆಯೇ ಅಲ್ಲದೆ ಬೇರೆ ಏನೂ ಅಲ್ಲ. ಆದ್ದರಿಂದ ಇದಕ್ಕೆ ಪ್ರತೀಕಾರವನ್ನು ಯೋಚಿಸು.' ಎಂದು.

9 **ಮದನಿಕೆ**—ಅದಕ್ಕೆ ಸುಸಂಗತೆ ಏನು ಹೇಳಿದಳು?

10 **ಕಾಂಚನಮಾಲೆ**— ಆಗ ಅವಳು ಹೇಳಿದಳು— 'ಈ ದಿನ ಚಿತ್ರಫಲಕ ವೃತ್ತಾಂತದಿಂದ ಸಂದೇಹಗೊಂಡ ಮಹಾರಾಣಿಯು ಸಾಗರಿಕೆಯನ್ನು ನನ್ನ ವಶಕ್ಕೆ ಒಪ್ಪಿಸುತ್ತಾ ನನಗೆ ಅನುಗ್ರಹಿಸಿದ ಉಡುಪಿನಿಂದ ಸಾಗರಿಕೆಗೆ ಭಟ್ಟಣಿ

ಯ ವೇಷವನ್ನೇ ಹಾಕಿ, ನಾನೂ ಕಾಂಚನಮಾಲೆಯ ವೇಷವನ್ನು ಧರಿಸಿ, ಮಹಾರಾಜನಲ್ಲಿಗೆ ಸಾಗರಿಕೆಯನ್ನು ಕರೆದುಕೊಂಡು ಬರುವೆನು. ನೀನು ಇಲ್ಲೇ ಇದ್ದು ನಮ್ಮನ್ನು ಇದಿರುನೋಡುತ್ತಿರು. ಹಾಗಾದರೆ ಮಾಧವೀಲತಾ ಮಂಟಪ ದಲ್ಲಿ ಅವಳೊಡನೆ ಮಹಾರಾಜನ ಸಮಾಗಮವಾಗುವುದು.'— ಎಂದು.

11 **ಮದನಿಕೆ** — ಸುಸಂಗತೆ, ಪರಿಜನವತ್ಸಲೆಯಾದ ಮಹಾರಾಣಿಯನ್ನು ಹೀಗೆ ವಂಚಿಸುತ್ತಿರುವ ನೀನು ಹಾಳಾದೆ!

12 **ಕಾಂಚನಮಾಲೆ** — ಮದನಿಕೆ, ಈಗ ನೀನು ಎಲ್ಲಿಗೆ ಹೊರಟೆ?

13 **ಮದನಿಕೆ** — ವ್ಯಾಯಲ್ಲಿ ಸ್ವಸ್ಥವಿಲ್ಲದ ಮಹಾರಾಜನ ಕುಶಲವೃತ್ತಾಂತ ವನ್ನು ತಿಳಿದುಬರಲು ಹೋದ ನೀನು ಎಷ್ಟು ಹೊತ್ತಾದರೂ ಬರದಿರಲು ಕಾತರ ಗೊಂಡ ಮಹಾರಾಣಿಯವರು ನಿನ್ನ ಬಳಿಗೇ ನನ್ನನ್ನು ಕಳುಹಿಸಿದರು.

14 **ಕಾಂಚನಮಾಲೆ**— ಇದೆಲ್ಲವನ್ನೂ ನಂಬುವ ಮಹಾರಾಣಿ ತುಂಬಾ ಸರಳ ಮನಸ್ಸಿನವಳು. (ಮುಂದೆ ನಡೆದು, ನೋಡಿ) ಇದೇನಿದು, ಮಹಾರಾಜನು ತನ್ನ ಮದನಾವಸ್ಥೆಯನ್ನು ಅಸ್ವಾಸ್ಥ್ಯದ ನೆಪದಿಂದ ಮರೆಮಾಚಿಕೊಂಡು, ಇಲ್ಲೇ ದಂತ ತೋರಣದ ಮೊಗಸಾಲೆಯ ಮೇಲೆ ಕುಳಿತಿದ್ದಾನೆ! ಆದ್ದರಿಂದ, ಬಾ; ಈ ವೃತ್ತಾಂತವನ್ನು ಭಟ್ಟಿಣಿಗೆ ಅರಿಕೆಮಾಡೋಣ. (ಇಬ್ಬರೂ ಹೋಗುತ್ತಾರೆ.)

## ಇಂತು ಪ್ರವೇಶಕ

(ಬಳಿಕ ಮದನಾವಸ್ಥೆಯನ್ನು ತೋರಿಸುತ್ತಾ ಕುಳಿತಿರುವ ರಾಜನು ಪ್ರವೇಶಿಸುತ್ತಾನೆ)

15 **ರಾಜ** — (ಹಂಬಲದಿಂದ ನಿಟ್ಟುಸಿರು ಬಿಡುತ್ತಾ)

16 ಎಲೈ ಹೃದಯವೇ, ಕಾಮಾಗ್ನಿಯಿಂದುಂಟಾಗಿರುವ ಈ ಸಂತಾಪವನ್ನು ಈಗ ಸಹಿಸಿಕೋ; ಇದಂತೂ ವಾಸಿಯಾಗುವ ಹಾಗೆ ಇಲ್ಲವೇ ಇಲ್ಲ! ಘಟ್ಟಿಯಾದ ಚಂದನರಸದಷ್ಟು ತಣ್ಣಗಿದ್ದ ಆಕೆಯ ಕೈ ಹೇಗೋ ನನ್ನ ಕೈಗೆ ಸಿಕ್ಕಿದ್ದಾಗ, ಮೂಢನಾದ ನಾನೇ ಅದನ್ನು ಹಿಡಿದುಕೊಂಡು ಚಿರಕಾಲ ನಿನ್ನ ಮೇಲೆ ಇಡದೆ ಹೋದೆ! – ಹೀಗಿರುವಾಗ ನೀನೇಕೆ ಅವಳಿಗಾಗಿ ವ್ಯರ್ಥವಾಗಿ ಕೊರಗುತ್ತೀಯೆ?

17 ಅಹೋ, ಎಂತಹ ದೊಡ್ಡ ಆಶ್ಚರ್ಯ!

18 ಮನಸ್ಸು ಸ್ವಾಭಾವಿಕವಾಗಿಯೇ ಚಂಚಲ ಮತ್ತು ಗುರಿಯಿಡಲು ಸಾಧ್ಯ ವಿಲ್ಲದ್ದು. ಆದರೂ ಇದೇನಿದು, ಕಾಮನು ತನ್ನ ಎಲ್ಲಾ ಬಾಣಗಳಿಂದಲೂ ನನ್ನ ಮನಸ್ಸನ್ನು ಏಕಕಾಲದಲ್ಲಿ ವೇಧಿಸಿದ್ದಾನಲ್ಲಾ! ||೨||

19 (ಮೇಲ್ಗಡೆ ನೋಡುತ್ತಾ) ಎಲೈ ಕುಸುಮಬಾಣನೆ!

20 ಮನ್ಮಥನಲ್ಲಿರುವುದು ಐದೇ ಬಾಣಗಳು; ಪ್ರಾಯಃ ನನ್ನಂತಹವರೇ ಆದ ಅಸಂಖ್ಯಾತ ಜನರು ಅವುಗಳಿಗೆ ಲಕ್ಷ್ಯ—ಎಂಬುದಾಗಿ ಲೋಕದಲ್ಲಿರುವ ಪ್ರಸಿದ್ಧಿಯು ನಿನ್ನಲ್ಲಿ ಹಿಂದು ಮುಂದಾಗಿರುವುದು ಕಂಡುಬರುತ್ತಿದೆ; ಯಾಕೆಂದರೆ, ಈಗ ಅಸಂಖ್ಯಾತವಾದ ನಿನ್ನ ಬಾಣಗಳ ಮೂಲಕ ಅಶರಣನಾದ, ಕಾಮಿಯಾದ, ನಾನೊಬ್ಬನೇ ಒಬ್ಬ ಪಂಚತಾವಸ್ಥೆಗೆ ನಿನ್ನಿಂದ ಇಳಿಸಲ್ಪಟ್ಟಿದ್ದೇನೆ. ॥ ೩ ॥

21 (ಆಲೋಚಿಸಿ) ಒಳಗೇ ಗೂಢವಾಗಿರುವ ಕೋಪದ ಆವೇಶವುಳ್ಳ ಮಹಾರಾಣಿಯ ದೃಗ್ಗೋಚರಳಾಗಿರುವ ಆ ಬಡಪಾಯಿ ಸಾಗರಿಕೆಯ ವಿಚಾರದಲ್ಲಿ ನಾನು ಕಾತುರನಾಗಿರುವಷ್ಟು ಇಂತಹ ಅವಸ್ಥೆಗಿಳಿದಿರುವ ನನ್ನ ವಿಷಯದಲ್ಲೇ ಇಲ್ಲ. ಹಾಗೆಯೇ—

22 'ನಾನು ಪತ್ತೆಯಾಗಿ ಬಿಟ್ಟೆ' ಎಂದು ನಾಚಿಕೆಯಿಂದ ಎಲ್ಲರೆದುರಿಗೂ ಮುಖವನ್ನು ತಗ್ಗಿಸುತ್ತಾಳೆ. ಯಾರಾದರೂ ಇಬ್ಬರು ಮಾತಾಡುತ್ತಿರುವುದನ್ನು ಕಂಡು, ತನ್ನ ವಿಚಾರವಾದ ಸಂಭಾಷಣೆಯೇ ಅದು ಎಂದು ಭಾವಿಸುತ್ತಾಳೆ. ಸಖಿಯರು ನಗುಮುಖರಾಗಿದ್ದಾಗ ತನ್ನ ಮನಃ ಕ್ಲೇಶವನ್ನು ವಿಶೇಷವಾಗಿ ತೋರಿಸುತ್ತಾಳೆ. ಹೃದಯದಲ್ಲಿ ನೆಲಸಿರುವ ಆತಂಕದಿಂದ ನನ್ನ ಪ್ರಿಯೆಯು ಪ್ರಾಯಃ ಕಂಗೆಟ್ಟುಹೋಗಿದ್ದಾಳೆ. ॥ ೪ ॥

23 ಅವಳ ಸಮಾಚಾರ ಸಂಗ್ರಹಿಸಿಕೊಂಡು ಬರಲು ವಸಂತಕನನ್ನು ಕಳುಹಿಸಿದ್ದೆ; ಅವನೇಕೆ ಇಷ್ಟು ವಿಳಂಬಮಾಡುತ್ತಿದ್ದಾನೆ?

(ಬಳಿಕ ಸಂತೋಷಗೊಂಡ ವಿದೂಷಕನು ಪ್ರವೇಶಿಸುತ್ತಾನೆ.)

24 **ವಿದೂಷಕ**— (ಸಂತೋಷದಿಂದ) ಹೀ, ಹೀ! ಭೋ! ಈದಿನ ನನ್ನಿಂದ ಪ್ರಿಯವಚನವನ್ನು ಕೇಳಿದಾಗ ನನ್ನ ಪ್ರಿಯವಯಸ್ಯನಿಗೆ ಆಗುವಷ್ಟು ಸಂತೋಷವು ಕೌಶಾಂಬೀರಾಜ್ಯ ಸಿಕ್ಕಿದಾಗಲೂ ಆಗಿರಲಿಲ್ಲವೆಂದೂಹಿಸುತ್ತೇನೆ. ಆದ್ದರಿಂದ ಮೊದಲು ಪ್ರಿಯವಯಸ್ಯನ ಬಳಿ ಹೋಗಿ ತಿಳಿಸಿಬಿಡುತ್ತೇನೆ. (ಮುಂದೆ ಹೋಗಿ, ನೋಡಿ) ಪ್ರಿಯವಯಸ್ಯನು ಈ ಕಡೆಯೇ ನೋಡುತ್ತಾ ಇರುವುದರಿಂದ, ನನ್ನನ್ನೇ ಇದಿರು ನೋಡುತ್ತಿದ್ದಾನೆಂದು ಊಹಿಸುತ್ತೇನೆ. ಅವನ ಹತ್ತಿರ ಹೋಗುತ್ತೇನೆ. (ಸಮೀಪಕ್ಕೆ ಹೋಗಿ) ಪ್ರಿಯವಯಸ್ಯನಿಗೆ ಜಯವಾಗಲಿ! ವಯಸ್ಯನೇ, ನೀ ಬಯಸಿದ್ದ ಕಾರ್ಯ ನಿನ್ನ ಅದೃಷ್ಟದಿಂದ ಸಿದ್ಧಿಸಿರುವುದು ತುಂಬಾ ಸಂತೋಷ!

25 **ರಾಜ**— (ಹರ್ಷದಿಂದ) ವಯಸ್ಯ, ಪ್ರಿಯೆ ಸಾಗರಿಕೆ ಕುಶಲವಷ್ಟೆ?

26 **ವಿದೂಷಕ—** (ಹರ್ಷದಿಂದ) ಮಿತ್ರ, ಬೇಗ ನೀನೇ ನೋಡಿ ತಿಳಿಯುವಿ.

27 **ರಾಜ—**(ಸಂತೋಷದಿಂದ) ಮಿತ್ರ; ಪ್ರಿಯೆಯ ದರ್ಶನವೂ ಆಗುವುದೋ?

28 **ವಿದೂಷಕ—** (ಅಹಂಕಾರದಿಂದ) ಯಾಕಯ್ಯಾ ಆಗಬಾರದು, ನಿನಗೆ ಬೃಹಸ್ಪತಿಯ ಬುದ್ಧಿವೈಭವವನ್ನೂ ಮೀರಿಸಿರತಕ್ಕ ಈ ಅಮಾತ್ಯನಿರುವಾಗ?

29 **ರಾಜ—**(ನಕ್ಕು) ಅದೇನಾಶ್ಚರ್ಯವಲ್ಲ. ನಿನಗೆ ಸಾಧ್ಯವಲ್ಲದ್ದು ಯಾವುದು? ಆದ್ದರಿಂದ ಹೇಳು; ವಿಸ್ತಾರವಾಗಿ ಕೇಳ ಬಯಸುತ್ತೇನೆ. (ವಿದೂಷಕನು ಕಿವಿಯಲ್ಲಿ ಹೇಳುತ್ತಾನೆ. ಸಂತೋಷದಿಂದ) ವಯಸ್ಯ, ಇಗೋ, ನಿನಗೆ ಪಾರಿತೋಷಿಕ. (ಎಂದು ಕೈಯಿಂದ ಹೊರತೆಗೆದು ತೋಡಾವನ್ನು ಕೊಡುತ್ತಾನೆ)

30 **ವಿದೂಷಕ—**(ತೋಡಾವನ್ನು ಧರಿಸಿ, ತನ್ನನ್ನೇ ನೋಡಿಕೊಂಡು) ಒಳ್ಳೆಯದು ಈ ಅಪ್ಪಟ ಚಿನ್ನದ ತೋಡಾದಿಂದ ಅಲಂಕೃತವಾಗಿರುವ ಕೈಯನ್ನು ಮನೆಗೆ ಹೋಗಿ ನನ್ನ ಹೆಂಡತಿಗೆ ತೋರಿಸುತ್ತೇನೆ.

31 **ರಾಜ—**(ಕೈಯಲ್ಲಿ ಹಿಡಿದುಕೊಂಡು, ತಡೆಯುತ್ತಾ) ಸಖನೇ, ಆಮೇಲೆ ತೋರಿಸುವಿಯಂತೆ. ಈಗ ಹೊತ್ತು ಎಷ್ಟು ಉಳಿದಿದೆ, ನೋಡು.

32 **ವಿದೂಷಕ—**(ಮುಂದೆ ಹೋಗಿ ನೋಡಿ, ಹರ್ಷದಿಂದ) ಅಯ್ಯಾ, ನೋಡು, ನೋಡು! ತೀವ್ರವಾದ ಅನುರಾಗ (ಕೆಂಪುಬಣ್ಣ)ದಿಂದ ಕಂಗೆಟ್ಟ ಮನಸ್ಸುಳ್ಳ ಭಗವಾನ್ ಸೂರ್ಯನು, ಸಂಧ್ಯಾವಧುವು ಸಂಕೇತ ನೀಡಿದ್ದಾಳೆಯೋ ಎಂಬಂತೆ, ಅಸ್ತಾಚಲದ ಶಿಖರದಲ್ಲಿರುವ ಕಾನನಕ್ಕೆ ಹೋಗುತ್ತಿದ್ದಾನೆ!

33 **ರಾಜ—** (ನೋಡಿ, ಹರ್ಷದಿಂದ) ಸಖನೇ, ಚೆನ್ನಾಗಿ ಗಮನಿಸಿದೆ. ಹಗಲು ಮುಗಿಯಿತು. ಅಂತೆಯೇ—

34 ಈ ನನ್ನ ಒಂದು ಚಕ್ರದ ರಥವು ಪ್ರಪಂಚವನ್ನೆಲ್ಲಾ ಸುತ್ತಿ ಬರುವಷ್ಟು ದೀರ್ಘವಾದ ದಾರಿಯನ್ನು ಮುಗಿಸಿ ಬೆಳಗ್ಗೆ ಪುನಃ ಹಿಂದಿರುಗಲಾರದು—ಎಂಬ ಯೋಚನೆಯ ಹೊರೆಯನ್ನು ಮನಸ್ಸಿನಲ್ಲಿ ಹೊತ್ತು, ಸೂರ್ಯನು ಅಸ್ತಾಚಲದ ಮೇಲೆ ತಂಗಿ, ಸಂಧ್ಯೆಯು ಎಳೆದುಕೊಂಡ ಮೇಲೆ ಉಳಿದಿರುವ ತನ್ನ ಕಿರಣಗಳ ಪರಿಕರರೂಪದಲ್ಲಿ ಸ್ಪಷ್ಟವಾಗಿ ಕಾಣಿಸುತ್ತಿರುವ ಚಿನ್ನದ ಆರೆ ಕಾಲುಗಳುಳ್ಳ ದಿಕ್ಚಕ್ರವನ್ನು ತನ್ನ ಕಡೆಗೆ ಎಳೆದು ತೆಗೆದುಕೊಂಡು ಹೋಗುತ್ತಿರುವಂತೆ ಇದೆ. ||೫||

ಮತ್ತು 35 'ಎಲೈ ಕಮಲ ಮುಖಿಯೇ, ನಾನು ಹೊರಟೆ. ಇಗೋ ನನ್ನ ಒಪ್ಪಂದ.—ನೀನು ಇನ್ನೂ ನಿದ್ರಿಸುತ್ತಿರುವಾಗಲೇ ನಾನು ನಿನ್ನನ್ನು ಎಚ್ಚರಗೊಳಿಸತಕ್ಕದ್ದು' ಎಂಬುದಾಗಿ ಹೇಳುತ್ತಾ, ಸೂರ್ಯನು ಕಮಲವನದ ಬಗ್ಗಿ ಹೋದ

ತಲೆಯಮೇಲೆ ತನ್ನ (ಕಿರಣಗಳೆಂಬ) ಕೈಯನ್ನಿಟ್ಟು, ಆಶ್ವಾಸನ ಕೊಡುತ್ತಿರುವನೋ ಎಂಬಂತಿದೆ. ||೬||

36 ಆದ್ದರಿಂದ ಏಳು; ಆ ಮಾಧವೀಲತಾ ಮಂಟಪಕ್ಕೇ ಹೋಗಿ ನನ್ನ ಪ್ರಿಯತಮೆಯು ಗೊತ್ತುಮಾಡಿರುವ ಸಂಕೇತದ ಸಮಯವನ್ನು ಇದಿರು ನೋಡೋಣ.

37 **ವಿದೂಷಕ**—ಸರಿಯಾದ್ದನ್ನು ಹೇಳಿದೆ. (ಏಳುತ್ತಾನೆ. ನೋಡಿ) ವಯಸ್ಯನೇ, ನೋಡು ನೋಡು! ಇಗೋ ಮುಂದವಾಗಿ ಅಂಟಿಕೊಂಡ ಬದಿಯಿಂದ ದಪ್ಪನಾದ ಕಾಡುಹಂದಿ ಮತ್ತು ಕೋಣಗಳ ಕಪ್ಪು ಬಣ್ಣವುಳ್ಳ ಈ ಕತ್ತಲೆಯ ರಾಶಿಯು ವಿರಳವಾಗಿರುವ ಈ ಮರಗಳ ತೋಪಿನ ಸನ್ನಿವೇಶವನ್ನು ದಟ್ಟನಾಗಿಮಾಡುತ್ತಾ, ಪೂರ್ವದಿಕ್ಕನ್ನು ಮರೆಯಿಸುತ್ತಾ ಹರಡುತ್ತಿದೆ.

38 **ರಾಜ**—(ಹರ್ಷದಿಂದ, ಸುತ್ತಲೂ ನೋಡಿ) ವಯಸ್ಯ, ಚೆನ್ನಾಗಿ ಗಮನಿಸಿದೆ. ಅಂತೆಯೇ—

39 ಶಿವನ ಕುತ್ತಿಗೆಯ (ಕಪ್ಪು) ಬಣ್ಣವನ್ನು ಅಪಹರಿಸಿರುವ ಈ ಕತ್ತಲೆಯ ರಾಶಿಯು ಮೊಟ್ಟ ಮೊದಲು ಪೂರ್ವದಿಕ್ಕನ್ನೇ ಆವರಿಸುತ್ತದೆ. ಬಳಿಕ ಬೇರೆ ದಿಕ್ಕನ್ನೂ ಕ್ರಮವಾಗಿ ಆಕ್ರಮಿಸುತ್ತಾ ಬೆಟ್ಟಗಳು, ಮರಗಳು, ಪಟ್ಟಣಗಳು ಮುಂತಾದ ವಿಭಾಗಗಳನ್ನೂ ಮರೆಯಿಸುತ್ತದೆ. ಆಮೇಲೆ ನಿಬಿಡವಾಗುವಿಕೆಯನ್ನು ಪಡೆದು ಜನರ ದೃಷ್ಟಿಪಥವನ್ನೂ ಅಪಹರಿಸಿ ಬಿಡುತ್ತದೆ. ||೭||

40 ಆದ್ದರಿಂದ, ದಾರಿ ತೋರಿಸು.

41 **ವಿದೂಷಕ**— ಪ್ರಿಯವಯಸ್ಯನು ಈ ಕಡೆ ಬರೋಣವಾಗಲಿ. (ಇಬ್ಬರೂ ಮುಂದೆ ಹೋಗುತ್ತಾರೆ. ನಿರೂಪಿಸಿ) ವಯಸ್ಯನೇ, ಇಗೋ ತುಂಬಾ ಗಿಡಗಳಿರುವುದರಿಂದ ಅಂಧಕಾರವೆಲ್ಲಾ ಒಟ್ಟುಗೂಡಿದೆಯೋ ಎಂಬಂತಿರುವ ಈ ಮಕರಂದೋದ್ಯಾನ ಸಿಕ್ಕಿತು. ಈಗ ಇಲ್ಲಿ ದಾರಿ ಕಾಣುವುದು ಹೇಗೆ?

42 **ರಾಜ**—ಒಳಗಿನ ಅಜ್ಞಾನದಿಂದ ವಿವಶವಾದ ಬುದ್ಧಿಯಂತೆ, ದೃಷ್ಟಿಯೂ ಕತ್ತಲೆಯು ನೆಲಸಿರುವಾಗ ಕಲುಷಿತವಾಗಿ ಸರಿಯಾದ ದಾರಿಯನ್ನು ಕಾಣುವುದಿಲ್ಲ. || ೮ ||

43 (ಸುವಾಸನೆಯನ್ನು ಹಿಡಿದು) ವಯಸ್ಯ, ಮುಂದೆ ನಡೆ. ಈ ದಾರಿ ಚೆನ್ನಾಗಿ ತಿಳಿದೇ ಇದೆಯಲ್ಲವೇ? ಅಂತೆಯೇ—

44 ಇದು ಸಂಪಿಗೆಯ ಸಾಲು; ನಿಜವಾಗಿಯೂ ಇದು ಆ ಸುಂದರವಾದ ಸಿಂಧುವಾರ; ಹಾಗೆಯೇ ಇದು ದಟ್ಟವಾದ ಬಕುಲವೃಕ್ಷಗಳ ಬೀದಿ; ಪಾಟಲ ಪಂಕ್ತಿ ಇದು;—ಈ ರೀತಿ (ದಾರಿಯಲ್ಲಿ) ವಿಧವಿಧವಾದ ಸುಗಂಧವನ್ನು ಆಘ್ರಾಣಿಸುತ್ತಾ,

ಅಲ್ಲಲ್ಲಿ ಸಿಕ್ಕಿದ ಮರಗಳ ಗುರುತುಗಳ ಮೂಲಕ, ಈದಾರಿಯು, ಇಮ್ಮಡಿಯಾದ ಕತ್ತಲೆಯಿಂದ ಮರೆಯಾಗಿದ್ದರೂ ಕೂಡ, ವ್ಯಕ್ತವಾಗುತ್ತಿದೆ. ||೮||

(ಇಬ್ಬರೂ ಮುಂದೆ ಹೋಗುತ್ತಾರೆ)

45 **ವಿದೂಷಕ** — ಓ, ಮದಿಸಿದ ದುಂಬಿಗಳು ಮೇಲಿಂದ ಮೇಲೆ ಬೀಳುತ್ತಿರುವ ಬಕುಳಪುಷ್ಪಗಳ ಪರಿಮಳದಿಂದ (ಎಲ್ಲಾ) ದಿಙ್ಮುಖಗಳನ್ನೂ ಸುವಾಸಿತವಾಗಿ ಮಾಡಿರುವ, ಮತ್ತು ಚೆನ್ನಾಗಿ ಸಾಣೆಹಿಡಿದ ಮರಕತಮಣಿಗಳ ಕುಟ್ಟಿಮಭೂಮಿ (ನೆಲಗಟ್ಟು) ಇರೋಣದರಿಂದಲೇ ಸುಖದಾಯಕವಾದ ಚರಣ ಸಂಚಾರದಿಂದ ಸೂಚಿತವಾಗಿರುವ ಆ ಮಾಧವೀಲತಾಮಂಟಪಕ್ಕೇ ಬಂದುಬಿಟ್ಟದ್ದೇವೆ. ಆದ್ದರಿಂದ ನೀನು ಇಲ್ಲೇ ಇರು. ನಾನೂ ಮಹಾರಾಣಿಯವರ ವೇಷವನ್ನು ಧರಿಸಿದ ಸಾಗರಿಕೆಯನ್ನು ಕರೆದುಕೊಂಡು ಬೇಗ ಬಂದು ಬಿಡುತ್ತೇನೆ.

46 **ರಾಜ**— ವಯಸ್ಯ, ಹಾಗಾದರೆ ಜಾಗ್ರತೆಮಾಡು.

47 **ವಿದೂಷಕ**—ಮಿತ್ರ, ತವಕಪಡಬೇಡ. ಇಗೋ ಬಂದುಬಿಟ್ಟೆ (ಹೋಗುತ್ತಾನೆ)

48 **ರಾಜ** — ಅಲ್ಲಿಯವರೆಗೆ ನಾನೂ ಈ ಮರಕತಶಿಲಾವೇದಿಕೆಯ ಮೇಲೆ ಕುಳಿತು ನನ್ನ ಪ್ರಿಯೆಯ ಸಂಕೇತ ಸಮಯವನ್ನು ಇದಿರು ನೋಡುತ್ತೇನೆ; (ಕುಳಿತು ಯೋಚಿಸುತ್ತಾ) ಅಹೋ! ತಮ್ಮ ಹೆಂಡತಿಯರೊಡನೆ ಸಮಾಗಮವನ್ನು ಅಲಕ್ಷಿಸುವ ಕಾಮಿಜನರಿಗೆ ಹೊಸ ಹೊಸ ಕಾಮಿನಿಯರ ವಿಷಯದಲ್ಲಿರುವ ಪಕ್ಷಪಾತ ಅವರ್ಣನೀಯವಾದುದು! ಅಂತೆಯೇ—

49 (ಹೊಸಬಳಾದ ಕಾಮಿನಿಯು) ಭಯಶಂಕಿತಳಾಗಿ, ಪ್ರಣಯದಿಂದ ವಿಶದವಾದ ನೋಟವನ್ನು (ಪ್ರಿಯನ) ಮುಖದಮೇಲೆ ಬೀರುವುದಿಲ್ಲ. ಕಂಠಾಲಿಂಗನ ಕಾಲದಲ್ಲೂ ಪ್ರೀತಿಯಿಂದ ತನ್ನೆರಡು ಸ್ತನಗಳನ್ನೂ (ಅವನ ದೇಹಕ್ಕೆ) ಒತ್ತಿ ಗೂಡಿಸುವುದಿಲ್ಲ. ಪ್ರಯತ್ನಪೂರ್ವಕವಾಗಿ ಹಿಡಿದು ನಿಲ್ಲಿಸಿದಾಗಲೂ 'ನಾನು ಹೋಗುತ್ತೇನೆ' ಎಂದೇ ಪ್ರಾಯಃ ಹೇಳುತ್ತಿರುತ್ತಾಳೆ.—ಆದರೂ ಸಂಕೇತಸ್ಥಾನದಲ್ಲಿರುವ ಕಾಮಿನಿಯು (ಕಾಂತನನ್ನು) ವಿಶೇಷವಾಗಿ ಸಂತೋಷಪಡಿಸುತ್ತಾಳೆ.

50 ಇದೇನು ವಸಂತಕನು ಹೊತ್ತುಮಾಡುತ್ತಿದ್ದಾನಲ್ಲಾ? ಈ ವೃತ್ತಾಂತವೇನಾದರೂ ದೇವೀ ವಾಸವದತ್ತೆಗೆ ತಿಳಿದುಬಿಟ್ಟಿರಬಹುದೇ!

(ಬಳಿಕ ವಾಸವದತ್ತೆಯೂ, ಕಾಂಚನಮಾಲೆಯೂ ಪ್ರವೇಶಿಸುತ್ತಾರೆ.)

51 **ವಾಸವದತ್ತೆ** —ಕಾಂಚನಮಾಲೆ, ನಿಜವಾಗಿಯೂ ಸಾಗರಿಕೆ ನನ್ನ ವೇಷ ಹಾಕಿಕೊಂಡು ಆರ್ಯಪುತ್ರನೊಡನೆ ಸಮಾಗಮಕ್ಕಾಗಿ ಹೋಗುವಳೇ?

52 **ಕಾಂಚನಮಾಲೆ** — ಇಲ್ಲದಿದ್ದರೆ ಭಟ್ಟಿಣಿಗೆ ಅರಿಕೆಮಾಡುತ್ತಿದ್ದೆನೇ?

ಅದೇಕೆ! ಚಿತ್ರಶಾಲೆಯ ಬಾಗಿಲಲ್ಲಿ ಕುಳಿತಿರುವ ವಸಂತಕನೇ ನಿನ್ನಲ್ಲಿ ನಂಬಿಕೆ ಮೂಡುವಂತೆ ಮಾಡುತ್ತಾನೆ.

53 **ವಾಸವದತ್ತೆ**— ಹಾಗಾದರೆ ಅಲ್ಲಿಗೇ ಹೋಗೋಣ.

54 **ಕಾಂಚನಮಾಲೆ**— ಭಟ್ಟಿಣಿ ಬರೋಣವಾಗಲಿ. (ಇಬ್ಬರೂ ಮುಂದೆ ನಡೆಯುತ್ತಾರೆ. ಬಳಿಕ ಮುಖಕ್ಕೆ ಬುರುಕಿ ಹಾಕಿಕೊಂಡು ಕುಳಿತಿರುವ ವಸಂತಕನು ಪ್ರವೇಶಿಸುತ್ತಾನೆ)

55 **ವಿದೂಷಕ**— (ಕಿವಿಗೊಟ್ಟು ಕೇಳಿ) ಚಿತ್ರಶಾಲೆಯ ದ್ವಾರದಲ್ಲಿ ಹೆಜ್ಜೆಸದ್ದು ಕೇಳಿಬರುತ್ತಿರುವುದರಿಂದ ಸಾಗರಿಕೆ ಬಂದಿದ್ದಾಳೆಂದು ಊಹಿಸುತ್ತೇನೆ.

56 **ಕಾಂಚನಮಾಲೆ**— ಭಟ್ಟಿಣಿ, ಇದೇ ಆ ಚಿತ್ರಶಾಲೆ. ಆದ್ದರಿಂದ ವಸಂತಕನಿಗೆ ಸಂಜ್ಞೆ ಮಾಡುತ್ತೇನೆ. (ಚಿಟಿಕೆ ಹೊಡೆಯುತ್ತಾಳೆ)

57 **ವಿದೂಷಕ**—(ಹರ್ಷದಿಂದ ಹತ್ತಿರಕ್ಕೆ ಬಂದು, ನಗುತ್ತಾ) ಸುಸಂಗತೆ, ಕಾಂಚನಮಾಲೆಯ ವೇಷವನ್ನು ನಿನಗೆ ಒಪ್ಪುವಂತೆಯೇ ಧರಿಸಿದ್ದೀಯೆ. ಇನ್ನು ಸಾಗರಿಕೆ ಈಗ ಎಲ್ಲಿ?

58 **ಕಾಂಚನಮಾಲೆ**—(ಬೆರಳಿನಿಂದ ತೋರಿಸುತ್ತಾ) ಇಗೋ ಈಕೆಯೇ ಅಲ್ಲವೇ?

59 **ವಿದೂಷಕ** — (ನೋಡಿ, ವಿಸ್ಮಯದಿಂದ) ಇವಳು ಸ್ಪಷ್ಟವಾಗಿಯೂ ವಾಸವದತ್ತೆಯೇ!

60 **ವಾಸವದತ್ತೆ** — (ಆಶಂಕೆಯಿಂದ, ಆತ್ಮಗತ) ಇವನು ನನ್ನ ಗುರುತು ಹಿಡಿದೇ ಬಿಟ್ಟನೋ?

61 **ವಿದೂಷಕ** — ಪೂಜ್ಯೆ ಸಾಗರಿಕೆ, ಈ ಕಡೆ ಬಾ. (ವಾಸವದತ್ತೆಯು ನಕ್ಕು ಕಾಂಚನಮಾಲೆಯನ್ನು ನೋಡುತ್ತಾಳೆ)

62 **ಕಾಂಚನಮಾಲೆ**—(ಏಕಾಂತವಾಗಿ, ಬೆರಳಿನಿಂದ ವಿದೂಷಕನನ್ನು ಹೆದರಿಸುತ್ತಾ) ಹತಾಶ! ಈ ಮಾತನ್ನು ನೆನಪಿಟ್ಟುಕೋ.

63 **ವಿದೂಷಕ**—ಬೇಗ, ಬೇಗ, ಸಾಗರಿಕೆ. ಇಗೋ, ಚಂದ್ರದೇವನು ಪೂರ್ವ ದಿಗಂತದಿಂದ ಮೇಲಕ್ಕೇರುತ್ತಿದ್ದಾನೆ.

54 **ವಾಸವದತ್ತೆ**-(ಸಂಭ್ರಮದಿಂದ, ಏಕಾಂತವಾಗಿ) ಭಗವಂತನಾದ ಚಂದ್ರನೇ! ನಮಸ್ತೆ. ಮುಹೂರ್ತಮಾತ್ರ ನಿನ್ನ ಶರೀರವನ್ನು ಮರೆಯಿಸಿಕೊಂಡಿರು: ಅಷ್ಟರಲ್ಲಿ ಈತನ ಅನುರಾಗವನ್ನು ನೋಡಿಬಿಡುತ್ತೇನೆ.(ಎಲ್ಲರೂ ಮುಂದೆ ನಡೆಯುತ್ತಾರೆ)

65 **ರಾಜ** — (ತವಕದಿಂದ, ಆತ್ಮಗತ) ಪ್ರಿಯಾಸಮಾಗಮ ಒದಗಿಬಂದಿದ್ದರೂ ನನ್ನ ಮನಸ್ಸೇಕೆ ತವಕಪಡುತ್ತಿದೆ? ಅಥವಾ—

66 ತೀವ್ರವಾದ ಮದನಾಗ್ನಿಯು (ಕಾಮಿನಿಯು) ಸನ್ನಿಹಿತವಾಗಿರುವಾಗ ಬಾಧಿಸುವಷ್ಟು ಆದಿಯಲ್ಲಿ ಬಾಧಿಸುವುದಿಲ್ಲ. ಮಳೆಗಾಲದಲ್ಲಿ, ಶೀಘ್ರದಲ್ಲೇ ಮಳೆ ಬೀಳುವುದಾಗಿರುವಾಗ ದಿವಸವು ವಿಶೇಷವಾದ ತಾಪದಿಂದ ಕೂಡಿರುತ್ತದೆ. ||೧೦||

67 **ವಿದೂಷಕ**— (ಕೇಳಿ) ಪೂಜ್ಯೆ ಸಾಗರಿಕೆ, ಇಗೋ ಪ್ರಿಯವಯಸ್ಯನು ನಿನ್ನ ವಿಚಾರವಾಗಿಯೇ ತವಕಪಡುತ್ತಾ ಏನೇನನ್ನೋ ಹೇಳುತ್ತಿದ್ದಾನೆ. ಆದ್ದರಿಂದ ಸ್ವಲ್ಪ ಇರು. ನೀನು ಬಂದಿರುವುದನ್ನು ಅವನಿಗೆ ತಿಳಿಸುತ್ತೇನೆ. (ವಾಸವದತ್ತೆ ತಲೆಯಲ್ಲಾಡಿಸಿ ಸಮ್ಮತಿ ಸೂಚಿಸುತ್ತಾಳೆ. ರಾಜನ ಬಳಿಗೆ ಹೋಗಿ) ವಯಸ್ಯನೇ, ನಿನ್ನ ಅದೃಷ್ಟವೇ ಅದೃಷ್ಟ! ಇಗೋ ಸಾಗರಿಕೆಯನ್ನು ಕರೆತಂದಿದ್ದೇನೆ.

68 **ರಾಜ**— (ಹರ್ಷದಿಂದ ಕೂಡಲೇ ಎದ್ದು) ವಯಸ್ಯ, ಎಲ್ಲಿ, ಆಕೆ ಎಲ್ಲಿ?

69 **ವಿದೂಷಕ** — (ಹುಬ್ಬು ಹಾರಿಸಿ) ಈಕೆಯೇ.

70 **ರಾಜ**— (ಹತ್ತಿರ ಹೋಗಿ) ಪ್ರಿಯೆ ಸಾಗರಿಕೆ!

71 ನಿನ್ನ ಮುಖವೇ ಚಂದ್ರ. ಕಣ್ಣು ಕನ್ನೈದಿಲೆ. ಕೈಗಳು ಕಮಲವನ್ನನುಕರಿಸುತ್ತಿವೆ. ನಿನ್ನ ತೊಡೆಗಳು ಬಾಳೆಯ ಕಂಬಗಳಂತಿವೆ. ತೋಳುಗಳು ಮೃಣಾಲವನ್ನು ಹೋಲುತ್ತಿವೆ. ಹೀಗೆ ಆಹ್ಲಾದಕಾರಿಗಳೇ ಆದ ಸಮಸ್ತ ಅಂಗಗಳಿಂದಲೂ ಕೂಡಿದವಳೇ, ಹತ್ತಿರ ಬಾ. ಯಾವ ಶಂಕೆಯೂ ಇಲ್ಲದೆ ಬೇಗ ನನ್ನನ್ನು ಆಲಿಂಗಿಸಿಕೊಂಡು ಮನ್ಮಥತಾಪದಿಂದ ಕಂಗೆಟ್ಟಿರುವ ನನ್ನ ಅಂಗಗಳನ್ನು ಸಂತೋಷಪಡಿಸು. || ೧೧ ||

72 **ವಾಸವದತ್ತೆ**—(ಏಕಾಂತವಾಗಿ) ಕಾಂಚನಮಾಲೆ, ಸ್ವಯಂ ಆರ್ಯಪುತ್ರನೇ ಹೀಗೆ ಹೇಳುತ್ತಿರುವನಲ್ಲಾ! ತಿರುಗಿ ನನ್ನ ಜತೆಯಲ್ಲಿ ಹೇಗೆ ಮಾತಾಡುವನೆಂಬುದು ಆಶ್ಚರ್ಯವಾಗಿದೆ.

73 **ಕಾಂಚನಮಾಲೆ**—(ಏಕಾಂತವಾಗಿ) ಭಟ್ಟಿಣಿ, ಇದು ಹೀಗೆಯೇ. ಸಾಹಸಿಕರಾದ ಪುರುಷರಲ್ಲಿ ಅಸಂಭವವಾದುದು ಯಾವುದು?

74 **ವಿದೂಷಕ**— ಪೂಜ್ಯೆ ಸಾಗರಿಕೆ, ಧೈರ್ಯವಾಗಿ ಪ್ರಿಯವಯಸ್ಯನೊಡನೆ ಮಾತಾಡು. ಸದಾಕುಪಿತಳಾದ ದೇವಿ ವಾಸವದತ್ತೆಯ ದುಷ್ಟಮಾತುಗಳಿಂದ ಕಿವಿಗಳು ಈಗಲೂ ಕಿರುಗುಟ್ಟಿವೆ: ನಿನ್ನ ಮಧುರವಚನಗಳ ಉಚ್ಚಾರಣೆಯು ಆಹ್ಲಾದಗೊಳಿಸಲಿ.

[75] **ವಾಸವದತ್ತೆ**— (ಏಕಾಂತವಾಗಿ ರೋಷದಿಂದ ನಗುತ್ತಾ) ಹಂಜೆ ಕಾಂಚನ ಮಾಲೆ, ನಾನು ಹೀಗೆ ಕರ್ಕಶವಾಗಿ ಮಾತಾಡುವವಳು ! ಆರ್ಯ ವಸಂತಕ ಮಾತ್ರ ಪ್ರಿಯಂವದ !

[76] **ಕಾಂಚನಮಾಲೆ** — (ಏಕಾಂತವಾಗಿ ಬೆರಳಿನಿಂದ ಹೆದರಿಸುತ್ತಾ) ಹತಾಶ, ಈ ಮಾತನ್ನು ಸ್ಮರಿಸಿಕೊಳ್ಳುವಿ.

[77] **ವಿದೂಷಕ**—(ನೋಡಿ) ವಯಸ್ಯ, ನೋಡು, ನೋಡು ! ಇಗೋ ಕುಪಿತಳಾದ ಕಾಮಿನಿಯ ಕಪೋಲದಂತಿರುವ ಭಗವಾನ್ ಮೃಗಲಾಂಛನ (ಚಂದ್ರ)ನು ಪೂರ್ವದಿಕ್ಕನ್ನು ಬೆಳಗುತ್ತಾ ಉದಯಿಸಿದ್ದಾನೆ.

[78] **ರಾಜ** – (ನೋಡಿ ಆಸೆಯಿಂದ) ಪ್ರಿಯೇ, ನೋಡು, ನೋಡು.

[79] ಯಾವ (ಚಂದ್ರ)ನ ಸರ್ವಸ್ವವೂ ಆದ ಕಾಂತಿಯನ್ನು ನಿನ್ನ ಮುಖವು ಅಪಹರಿಸಿಬಿಟ್ಟದೆಯೋ, ಆ ನಿಶಾನಾಥನಾದ ಚಂದ್ರನು ನಿನಗೆ (ತಕ್ಕ) ಪ್ರತಿಕ್ರಿಯೆ ಮಾಡುವುದಕ್ಕೋ ಎಂಬಂತೆ ಉದಯಾಚಲ ಶಿಖರವನ್ನು ಹತ್ತಿ ಎರಡು ಕೈಗಳನ್ನೂ ಮೇಲಕ್ಕೆತ್ತಿ (ನಿನ್ನ) ಮುಂದೆ ನಿಂತಿದ್ದಾನೆ. || ೧೨ ||

[80] ಪ್ರಿಯೆ, ಹೀಗೆ ಉದಯಿಸುತ್ತಿರುವ ಈ ಚಂದ್ರನಿಂದ ತನ್ನ ಜಡತ್ವ ಪ್ರದರ್ಶಿತವಾಗುತ್ತಿದೆಯಲ್ಲವೇ ! ಯಾಕೆಂದರೆ—

[81] (ನಿನ್ನ ಮುಖಚಂದ್ರನು) ಕಮಲದ ಕಾಂತಿಯನ್ನು ಕಂದಿಸುವುದಿಲ್ಲವೇ ? ಕಣ್ಣುಗಳಿಗೆ ಆನಂದವುಂಟುಮಾಡುವುದಿಲ್ಲವೇ ? ದರ್ಶನಮಾತ್ರದಿಂದಲೇ ಮೀನಕೇತನ (=[1]ಸಮುದ್ರ; [2]ಮನ್ಮಥ) ನನ್ನು ಉಕ್ಕಿಸುವುದಿಲ್ಲವೇ ? (ಇಂತಹ) ನಿನ್ನ ಮುಖಚಂದ್ರನಿರುವಾಗಲೇ ಈ ಬೇರೊಂದು ಶೀತಾಂಶುವಾದ ಚಂದ್ರನು ಮೆರೆಯುತ್ತಾನಲ್ಲಾ ! ಇದು ಅಮೃತದಿಂದ ಬಂದಿರುವ ದರ್ಪ ಎನ್ನೋಣವೆಂದರೆ, ಎಲೈ ಬಿಂಬಾಧರೆ ! ಅದು ನಿನ್ನಲ್ಲೂ ಇದ್ದೇ ಇದೆಯಲ್ಲವೇ ? || ೧೩ ||

[82] **ವಾಸವದತ್ತೆ**— (ರೋಷದಿಂದ ಅವಗುಂಠನವನ್ನು ತೆಗೆದುಹಾಕಿ) ಆರ್ಯಪುತ್ರ, ಸತ್ಯವಾಗಿಯೂ ನಾನು ಸಾಗರಿಕೆಯೇ ! (ಯಾಕೆಂದರೆ) ನೀನು ಸಾಗರಿಕೆಯಿಂದ ತುಂಬಿಹೋದ ಮನಸ್ಸಿನಿಂದ ಕೂಡಿ ಎಲ್ಲವನ್ನೂ ಸಾಗರಿಕಾಮಯವಾಗಿ ಕಾಣುತ್ತೀಯೆ.

[83] **ರಾಜ**—(ನೋಡಿ, ಬೆಪ್ಪಾಗಿ; ಏಕಾಂತವಾಗಿ) ಹಾ ಧಿಕ್ ! ಕಷ್ಟ ! ಇದೇನು ದೇವೀ ವಾಸವದತ್ತೆ ! ವಯಸ್ಯ, ಇದೇನು ?

84 **ವಿದೂಷಕ** — (ವಿಷಾದದಿಂದ) ವಯಸ್ಯ, ಇನ್ನೇನು? ನಮ್ಮ ಜೀವಕ್ಕೆ ಸಂಚಕಾರ ಇದು.

85 **ರಾಜ**—(ಕುಳಿತು, ಕೈ ಮುಗಿದುಕೊಂಡು) ಪ್ರಿಯೆ ವಾಸವದತ್ತೆ, ಪ್ರಸನ್ನಳಾಗು.

86 **ವಾಸವದತ್ತೆ** —(ಅವನೆದುರಿಗೆ ಕಣ್ಣೀರು ಹರಿಸುತ್ತಾ) ಆರ್ಯಪುತ್ರ, ಹಾಗೆನ್ನ ಬೇಡ. ಈ ಮಾತುಗಳು ಈಗ ಬೇರೆಯವಳಿಗೆ ಸೇರಿದ್ದು.

87 **ವಿದೂಷಕ**—(ಆತ್ಮಗತ) ಈಗ ಇದಕ್ಕೇನು ಆಟ ಹೂಡಲಿ? ಒಳ್ಳೆಯದು. ಹೀಗೆ ಹೇಳುತ್ತೇನೆ. (ಪ್ರಕಾಶ) ಪೂಜ್ಯೆ, ನೀನು ಮಹಾನುಭಾವಳಲ್ಲವೇ? ಆದ್ದರಿಂದ ಪ್ರಿಯವಯಸ್ಯನ ಈವರೆಗಿನ ಅಪರಾಧವನ್ನು ಕ್ಷಮಿಸಿಬಿಡು.

88 **ವಾಸವದತ್ತೆ** — ಆರ್ಯ ವಸಂತಕ, ಮೊಟ್ಟಮೊದಲನೆಯ ಸಂಗಮಕ್ಕೇ ವಿಘ್ನವೊಡ್ಡುತ್ತಿರುವ ನನ್ನಿಂದಲೇ ಅಲ್ಲವೇ ಅಪರಾಧವಾಗಿರುವುದು?

89 **ರಾಜ** — ಹೀಗೆ ಪ್ರತ್ಯಕ್ಷವಾಗಿಯೇ ನನ್ನ ತಪ್ಪನ್ನು ಕಂಡಿರುವಾಗ (ಇವಳಿಗೆ) ಏನು ತಾನೇ ಹೇಳಲಿ? ಆದರೂ ವಿಜ್ಞಾಪಿಸುತ್ತೇನೆ.

90 ದೇವಿ, ಲಾಕ್ಷಾರಾಗದಿಂದ ನಿನ್ನ ಕಾಲುಗಳಿಗೆ ಬಳಿದಿರುವ ಕೆಂಪುಬಣ್ಣವನ್ನು ಕಂಗೆಟ್ಟಿರುವ ನಾನು ನನ್ನ ಶಿರಸ್ಸಿನಿಂದ ಒರಸಿ ಬಿಡುತ್ತೇನೆ. ಆದರೆ ಕೋಪವೆಂಬ ಉಪರಾಗದಿಂದ ನಿನ್ನ ಮುಖವೆಂಬ ಚಂದ್ರಬಿಂಬದಲ್ಲಿ ಉಂಟಾಗಿರುವುದನ್ನು, ನನ್ನ ಮೇಲೆ ನಿನ್ನ ವಿಶೇಷವಾದ ಕರುಣೆಯಿದ್ದರೆ ಮಾತ್ರ, ಹೋಗಲಾಡಿಸಲು ಶಕ್ತನಾದೇನು. ||೧೪|| (ಕಾಲುಗಳಿಗೆ ಅಡ್ಡಬೀಳುತ್ತಾನೆ)

91 **ವಾಸವದತ್ತೆ** — (ಕೈಯಿಂದ ತಡೆಯುತ್ತಾ) ಆರ್ಯಪುತ್ರ, ಏಳು, ಏಳು. ಆರ್ಯಪುತ್ರನ ಈ ಬಗೆಯ ಮನಸ್ಸನ್ನು ತಿಳಿದೂ ತಿಳಿದೂ ಕೋಪಿಸುವ ನಾನು ನಿರ್ಲಜ್ಜಳೇ ಸರಿ. ಆದ್ದರಿಂದ ಆರ್ಯಪುತ್ರನು ಸುಖವಾಗಿರಲಿ. ನಾನು ಹೋಗುವೆನು.

(ಹೋಗಲು ಹೊರಡುತ್ತಾಳೆ)

92 **ಕಾಂಚನಮಾಲೆ** — ಭಟ್ಟಿಣಿ, ಪ್ರಸನ್ನತೆ ತೋರು. ಈ ರೀತಿ ಕಾಲಿಗೆ ಬಿದ್ದ ಮಹಾರಾಜನನ್ನು ಬಿಟ್ಟು ಬಿಟ್ಟು ಹೋದಮೇಲೆ ದೇವಿಯವರು ಪಶ್ಚಾತ್ತಾಪಪಡಬೇಕಾಗುತ್ತದೆ.

93 **ವಾಸವದತ್ತೆ** — ಪೆದ್ದಿ, ಬಿಡು, ಬಿಡು. ಇಲ್ಲಿ ಪ್ರಸನ್ನತೆಗಾಗಲೀ ಪಶ್ಚಾತ್ತಾಪಕ್ಕಾಗಲೀ ಕಾರಣವೆಲ್ಲಿದೆ? ಬಾ, ಹೋಗೋಣ.

94 **ರಾಜ** — ದೇವಿ, ಪ್ರಸನ್ನಳಾಗು, ಪ್ರಸನ್ನಳಾಗು. ('ದೇವಿ, ಲಾಕ್ಷಾರಾಗದಿಂದ....' ಇತ್ಯಾದಿ 90 ||೧೪ನ್ನು ತಿರುಗಿ ಹೇಳುತ್ತಾನೆ.)

95 **ವಿದೂಷಕ** — ಏಳಯ್ಯಾ, ಆ ದೇವಿ ವಾಸವದತ್ತೆ ಹೊರಟುಹೋದಳು.

ಆದ್ದರಿಂದ ಇಲ್ಲೇಕೆ ಅರಣ್ಯರೋದನವಮಾಡುತ್ತೀ?

96 **ರಾಜ** — (ಮುಖವನ್ನು ಮೇಲಕೆತ್ತಿ) ಪ್ರಸನ್ನತೆ ತೋರದೆಯೇ ದೇವಿ ಹೊರಟು ಹೋದಳೇ?

97 **ವಿದೂಷಕ** — ಪ್ರಸನ್ನತೆ ತೋರವೆ ಇನ್ನೇನು, ನಾವು ಶರೀರದಲ್ಲಿ ಯಾವುದೊಂದು ಗಾಯವೂ ಇಲ್ಲದೆ ಇನ್ನೂ ಉಳಿದಿರುವಾಗ?

98 **ರಾಜ** — ಛಿ ಮೂರ್ಖ! ಹೀಗೇಕೆ ನನ್ನನ್ನು ಹಾಸ್ಯಮಾಡುತ್ತಿದ್ದೀ? ಈ ಅನರ್ಥವೆಲ್ಲಾ ನಿನ್ನಿಂದಲೇ ಒದಗಿ ಬಂತಲ್ಲವೇ?

99 ಪ್ರಣಯಬಹುಮಾನದಿಂದ ಪ್ರೀತಿಯು ದಿನೇ ದಿನೇ (ನಮ್ಮಲ್ಲಿ) ಬೆಳೆದು ಬಂದಿದೆ. ಹೀಗಿರುವಲ್ಲಿ, ಹಿಂದೆಂದೂ ಮಾಡದೆ ಈಗ ನಾನು ಮಾಡಿರುವ ಈ ತಪ್ಪನ್ನು ಕಂಡು ಅಸಹನಶೀಲಳಾದ ನನ್ನ ಪ್ರಿಯೆಯು ತನ್ನ ಪ್ರಾಣತ್ಯಾಗ ಮಾಡಿಬಿಡುವಳೆಂಬುದು ಸ್ಪಷ್ಟವಾಗಿಯೇ ಇದೆ. ಅತಿಶಯವಾದ ಪ್ರೀತಿಯು ತಪ್ಪಿತವನ್ನೆಂದಿಗೂ ಸೈರಿಸದಲ್ಲವೇ! ||೧೫||

100 **ವಿದೂಷಕ** — ಅಯ್ಯಾ, ರೋಷಗೊಂಡಿರುವ ದೇವಿಯು ಏನು ಮಾಡುವಳೆಂಬುದು ತಿಳಿಯುವುದಿಲ್ಲ. ಸಾಗರಿಕೆಯ ಜೀವಿತವಂತೂ ದುಷ್ಕರವೆಂದೇ ಊಹಿಸುತ್ತೇನೆ.

101 **ರಾಜ** — ವಯಸ್ಯ, ನಾನೂ ಹಾಗೆಯೇ ಭಾವಿಸುತ್ತೇನೆ. ಹಾ! ಪ್ರಿಯೆ ಸಾಗರಿಕೆ!

(ಬಳಿಕ ವಾಸವದತ್ತೆಯ ವೇಷ ಧರಿಸಿದ ಸಾಗರಿಕೆ ಪ್ರವೇಶಿಸುತ್ತಾಳೆ)

102 **ಸಾಗರಿಕೆ** — (ಉದ್ವೇಗದಿಂದ) ಮಹಾರಾಣಿಯವರ ಈ ವೇಷ ಹಾಕಿಕೊಂಡು ಸಂಗೀತಶಾಲೆಯಿಂದ ಹೊರಕ್ಕೆ ಬರುವಾಗ ಯಾರಿಂದಲೂ ಅದೃಷ್ಟವಶಾತ್ ಲಕ್ಷಿಸಲ್ಪಡಲಿಲ್ಲ! ಈಗೇನು ಮಾಡಲಿ? (ಕಣ್ಣೀರಿಡುತ್ತಾ ಯೋಚಿಸುತ್ತಾಳೆ)

103 **ವಿದೂಷಕ** — ಇದೇಕಯ್ಯಾ ಮೂಢನಂತೆ ನಿಂತಿದ್ದೀಯೆ? ಇದಕ್ಕೆ ಪ್ರತೀಕಾರವನ್ನು ಯೋಚಿಸು.

104 **ರಾಜ** — ವಯಸ್ಯ, ಅದೇ ಯೋಚಿಸುತ್ತಿದ್ದೇನೆ. ದೇವಿಯ ಪ್ರಸನ್ನತೆಯನ್ನು ಬಿಟ್ಟರೆ ಬೇರೆ ಉಪಾಯವೇ ಕಾಣುತ್ತಿಲ್ಲ. ಆದ್ದರಿಂದ ಬಾ. ಅಲ್ಲಿಗೇ ಹೋಗೋಣ. (ಮುಂದೆ ಹೋಗುತ್ತಾರೆ)

105 **ಸಾಗರಿಕೆ** — (ಕಣ್ಣೀರಿಂದ ಕೂಡಿ, ಆಲೋಚಿಸಿ) ಈಗ ನೇಣು ಹಾಕಿಕೊಂಡು ಸಾಯುವುದೇ ಲೇಸು. ಹೀಗೆ ಮಾಡಿದರೆ, ಸುಸಂಗತೆಯಂತೆ ನಮ್ಮ ಸಂಕೇತದ

ವೃತ್ತಾಂತವನ್ನರಿತ ದೇವಿಯಿಂದ ಪರಿಭವ ಹೊಂದದಿರಬಹುದು. ಆದ್ದರಿಂದ ಈ ಅಶೋಕ ವೃಕ್ಷಕ್ಕೆ ಹೋಗಿ ಉದ್ದೇಶಿಸಿರುವ ಕೆಲಸವನ್ನು ಮಾಡುತ್ತೇನೆ.

(ಮುಂದೆ ಹೋಗುತ್ತಾಳೆ)

106 **ವಿದೂಷಕ**—(ಕಿವಿಗೊಟ್ಟು ಕೇಳಿ) ಇರು, ಸ್ವಲ್ಪ ಇರು. ಹೆಜ್ಜೆಯ ಸದ್ದು ಕೇಳಿಬರುತ್ತಿದೆ. ಒಂದುವೇಳೆ ಪಶ್ಚಾತ್ತಾಪಗೊಂಡು ದೇವಿಯೇ ಪುನಃ ಬಂದಿರಬಹುದು.

107 **ರಾಜ**— ವಯಸ್ಯ, ದೇವಿಯು ಮಹಾನುಭಾವಳೇ ಸರಿ. ಒಂದುವೇಳೆ ಹೀಗೂ ಸಂಭವಿಸಬಹುದು. ಅದ್ದರಿಂದ ಬೇಗ ನೋಡು.

108 **ವಿದೂಷಕ**—ನೀನು ಅಪ್ಪಣೆ ಮಾಡಿದಂತೆ. (ಹೋಗುತ್ತಾನೆ)

109 **ಸಾಗರಿಕೆ**— (ಹತ್ತಿರ ಹೋಗಿ) ಈಗ ಈ ಮಾಧವೀ ಲತೆಯಿಂದ ಕುಣಿಕೆ ಮಾಡಿ ಅಶೋಕವೃಕ್ಷಕ್ಕೆ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ. (ಎಂದು ಲತಾಪಾಶವನ್ನು ಮಾಡಿ) ಹಾ ಅಪ್ಪ! ಹಾ ಅಮ್ಮ! ಇಗೋ ಮಂದಭಾಗಿನಿಯಾದ ನಾನು ಅನಾಥಳೂ ಅಶರಣಳೂ ಆಗಿ ಈಗ ಸಾಯುತ್ತಿದ್ದೇನೆ.

(ಎಂದು ಲತಾಪಾಶವನ್ನು ಕುತ್ತಿಗೆಗೆ ಹಾಕಿಕೊಳ್ಳುತ್ತಾಳೆ)

110 **ವಿದೂಷಕ**—(ನೋಡಿ) ಇವಳು ಬೇರೆ ಯಾರು? ಇದೇನು ಪುನಃ ದೇವೀ ವಾಸವದತ್ತೆ! (ಸಂಭ್ರಮದಿಂದ, ಗಟ್ಟಿಯಾಗಿ) ವಯಸ್ಯ, ರಕ್ಷಿಸು, ರಕ್ಷಿಸು! ಇಗೋ ದೇವೀವಾಸವದತ್ತೆ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾಳೆ.

111 **ರಾಜ**—(ಸಂಭ್ರಮದಿಂದ, ಹತ್ತಿರ ಬಂದು) ಎಲ್ಲಿ, ಎಲ್ಲಿ?

112 **ವಿದೂಷಕ**— ಇಗೋ ಈಕೆ.

113 **ರಾಜ**—(ಸಮೀಪಕ್ಕೆ ಹೋಗಿ, ಕುತ್ತಿಗೆಯಿಂದ ಪಾಶವನ್ನು ತೆಗೆದುಹಾಕುತ್ತಾ) ಎಲೆ ಸಾಹಸಕಾರಿಣಿ, ಇದೇನು ಅಕಾರ್ಯವನ್ನು ಮಾಡುತ್ತಿದ್ದೀಯೆ?

114 ಈ ಪಾಶವು ನಿನ್ನ ಕುತ್ತಿಗೆಯಲ್ಲಿರಲಾಗಿ ನನ್ನ ಪ್ರಾಣ ಕಂಠಗತವಾಗಿದೆ. ಆದ್ದರಿಂದ, ಈ (ನನ್ನ) ಪ್ರಯತ್ನ ಸ್ವಾರ್ಥಕ್ಕಾಗಿ. ನೀನೀ ಸಾಹಸವನ್ನು ಬಿಟ್ಟು ಬಿಡು, ಪ್ರಿಯಳೇ! ॥ ೧೬ ॥

115 **ಸಾಗರಿಕೆ**—(ರಾಜನನ್ನು ನೋಡಿ) ಎಲೆ, ಇದೇನಿದು? ಮಹಾರಾಜನೇ ಇಲ್ಲಿ! (ಹರ್ಷದಿಂದ ಆತ್ಮಗತ) ಈತನನ್ನು ಕಂಡಮೇಲೆ ಪುನಃ ನನಗೆ ಜೀವಿಸಬೇಕೆಂಬ ಅಭಿಲಾಷೆ ನಿಜವಾಗಿಯೂ ಉಂಟಾಗಿದೆ. ಅಥವಾ ಈತನನ್ನು ನೋಡಿ

ಕೃತಾರ್ಥಳಾಗಿ, ಸಂತೋಷದಿಂದ ನೇಣುಹಾಕಿಕೊಂಡು ಪ್ರಾಣಬಿಡುತ್ತೇನೆ. (ಪ್ರಕಾಶ) ಮಹಾರಾಜರು ಬಿಡೋಣವಾಗಲಿ. ನಾನಂತೂ ಪರಾಧೀನೆ. ಸಾಯಲು ಪುನಃ ಈ ಬಗೆಯ ಅವಕಾಶವನ್ನು ಹೊಂದಲಾರೆ. (ಎಂದು ಪುನಃ ಕಂಠದಲ್ಲಿ ಪಾಶ ವನ್ನು ಹಾಕಿಕೊಳ್ಳ ಬಯಸುತ್ತಾಳೆ)

116 **ರಾಜ**—(ಕಂಡು ಹರ್ಷದಿಂದ) ಇದೇನು, ನನ್ನ ಪ್ರಿಯೆ ಸಾಗರಿಕೆಯೇ! (ಕುತ್ತಿಗೆಯಿಂದ ಪಾಶವನ್ನು ತೆಗೆದುಹಾಕಿ)

117 ತೀರ ಹೆಚ್ಚಾದ ಈ ದುಡುಕಿನಿಂದ ಪ್ರಯೋಜನವಿಲ್ಲ. ಬೇಗ ಈ ಲತಾ ಪಾಶವನ್ನು ಬಿಟ್ಟುಬಿಡು. ಎಲೈ ಜೀವಿತೇಶಳೇ! ಹೊರಹೊರಟಿರುವ ನನ್ನ ಪ್ರಾಣವನ್ನು ತಡೆಯುವುದಕ್ಕಾಗಿ ಕ್ಷಣಕಾಲ ನನ್ನ ಕುತ್ತಿಗೆಯ ಮೇಲೆ ನಿನ್ನ ಬಾಹುಪಾಶವನ್ನು ಇಡು. ॥ ೧೭ ॥

118 (ಎಂದು ಅವಳ ತೋಳುಗಳನ್ನೆತ್ತಿ, ಕುತ್ತಿಗೆಯ ಮೇಲಿಟ್ಟುಕೊಂಡು, ಸ್ಪರ್ಶ ಸುಖವನ್ನಭಿನಯಿಸಿ, ವಿದೂಷಕನನ್ನು ಕುರಿತು) ಸಖನೇ, ಇದು ಮೋಡವಿಲ್ಲದ ಮಳೆ!

119 **ವಿದೂಷಕ**— ಅಯ್ಯಾ, ಇದು ಹೀಗೆಯೇ ಸರಿ. ಅಕಾಲದ ಸುಂಟರ ಗಾಳಿಯಾಗಿ ದೇವೀ ವಾಸವದತ್ತೆ ಬಾರದಿದ್ದರೆ.

(ಬಳಿಕ ವಾಸವದತ್ತೆ ಮತ್ತು ಕಾಂಚನಮಾಲೆ ಪ್ರವೇಶಿಸುತ್ತಾರೆ)

120 **ವಾಸವದತ್ತೆ**—ಎಲೆ ಕಾಂಚನಮಾಲೆ, ಹಾಗೆ ಕಾಲಿಗೆ ಬಿದ್ದ ಆರ್ಯಪುತ್ರ ನನ್ನು ಅಲಕ್ಷಿಸಿ ಬಂದು ನಾನು ತುಂಬಾ ನಿಷ್ಠುರವಾದ ಕೆಲಸ ಮಾಡಿಬಿಟ್ಟೆ. ಆದ್ದರಿಂದ ಈಗ ನಾನೇ ಹೋಗಿ ಆರ್ಯಪುತ್ರನನ್ನು ಸಂತೈಸುತ್ತೇನೆ.

121 **ಕಾಂಚನಮಾಲೆ** — ಮಹಾರಾಣಿಯವರನ್ನು ಬಿಟ್ಟು ಬೇರೆ ಯಾರು ಹೀಗೆ ಹೇಳಬಲ್ಲರು? ಒಳ್ಳೆಯದು; ಮಹಾರಾಜರೇ ದುರ್ಜನರಾಗಿರಲಿ; ದೇವಿ ಯವರು ಮಾತ್ರ (ಹಾಗಾಗುವುದು) ಬೇಡ. ಆದ್ದರಿಂದ ಬರೋಣವಾಗಲಿ. (ಇಬ್ಬರೂ ಹೋಗುತ್ತಾರೆ)

122 **ರಾಜ** — ಎಲೈ ಮುಗ್ಧೆ! ಏನು ನಿನ್ನ ಮಧ್ಯಸ್ಥಮನೋಭಾವದಿಂದ ಈಗಲೂ ನಾವು ವಿಫಲಮನೋರಥರಾಗಬೇಕೇ?

123 **ಕಾಂಚನಮಾಲೆ**—(ಕಿವಿಗೊಟ್ಟು ಕೇಳಿ) ಭಟ್ಟಿಣಿ, ಸಮೀಪದಲ್ಲೇ ಮಹಾ ರಾಜರು ಮಾತಾಡುತ್ತಿರುವುದರಿಂದ ನಿನ್ನನ್ನೇ ಸಂತೈಸಲು ಬರುತ್ತಿರುವ ರೆಂದೂಹಿಸುತ್ತೇನೆ.'

124 **ವಾಸವದತ್ತೆ**—(ಹರ್ಷದಿಂದ) ಹಾಗಾದರೆ ಕಾಣಿಸದಂತೆಯೇ ಹಿಂದು ಗಡೆಯಿಂದ ಹೋಗಿ ಕುತ್ತಿಗೆಗೆ ಅಪ್ಪಿಕೊಂಡು ಪ್ರಸನ್ನಗೊಳಿಸುತ್ತೇನೆ.

125 **ವಿದೂಷಕ** — ಪೂಜ್ಯೆಸಾಗರಿಕೆ, ಸಮಾಧಾನಗೊಂಡು ಪ್ರಿಯವಯಸ್ಯನನ್ನು ಮಾತಾಡಿಸು.

126 **ವಾಸವದತ್ತೆ** -- (ಕಿವಿಗೊಟ್ಟು ಕೇಳಿ ವಿಷಾದದಿಂದ) ಕಾಂಚನಮಾಲೆ, ಸಾಗರಿಕೆಯೂ ಇಲ್ಲಿದ್ದಾಳೆ. ಆದ್ದರಿಂದ ಆಲಿಸೋಣ. ತಿಳಿದುಕೊಂಡು ಆ ಮೇಲೆ ಹತ್ತಿರಕ್ಕೆ ಹೋಗುತ್ತೇನೆ. (ಹಾಗೆಯೇ ಮಾಡುತ್ತಾಳೆ)

127 **ಸಾಗರಿಕೆ** -- ಮಹಾರಾಜ, ಈ ಸುಳ್ಳು ದಾಕ್ಷಿಣ್ಯದಿಂದೇನು ? ಪ್ರಾಣಕ್ಕಿಂತ ಹೆಚ್ಚು ವಲ್ಲಭೆಯಾಗಿರುವ ಮಹಾರಾಣಿಯ ಬಗ್ಗೆ ಪುನಃ ನನ್ನನ್ನು ಅಪರಾಧಿನಿಯಾಗುವಂತೇಕೆ ಮಾಡುತ್ತೀರಿ ?

128 **ರಾಜ** - ಎಲೌ, ನೀನು ಸುಳ್ಳು ಹೇಳುವವಳಾಗಿಬಿಟ್ಟೆ. ಯಾಕೆಂದರೆ—

129 ಅವಳೆರಡು ಸ್ತನಗಳು ನಿಟ್ಟುಸಿರಿನಿಂದ ಅದಿರುತ್ತಿರಲಾಗಿ, ನಾನು ಕಂಪಿಸಿದೆ. ಮೌನವಾಗಿದ್ದಾಗ ಪ್ರಿಯವಚನಗಳನ್ನಾಡಿದೆ. ಅವಳ ಮುಖವು ಹುಬ್ಬುಗಂಟುಹಾಕಿರಲು ನಾನು ಹಾಗೆಯೇ ಅವಳ ಕಾಲಿಗೆರಗಿದೆ. ಹೀಗೆ ನಾನು ದೇವಿಗೆ ಮಾಡಿದುದೆಲ್ಲವೂ ಅವಳ ಸಹಜವಾದ ಘನತೆಯಿಂದ ಉಂಟಾದ ಸೇವೆಯೇ. ಆದರೆ ಪ್ರೇಮದ ಕಟ್ಟಿನಿಂದ ಬೆಳೆದು ಹೆಚ್ಚಿದ ರಸವುಳ್ಳ ಪ್ರೀತಿಯೆಂಬುದು ಮಾತ್ರ ನಿನ್ನಲ್ಲೇ (ಬೇರೂರಿ) ಇದೆ. ||೧೮||

130 **ವಾಸವದತ್ತೆ** — (ಹತ್ತಿರ ಹೋಗಿ ರೋಷದಿಂದ) ಆರ್ಯಪುತ್ರ, ಇದು (ನಿನಗೆ) ತಕ್ಕದ್ದು !

131 **ರಾಜ** —(ನೋಡಿ, ಬೆಪ್ಪಾಗಿ) ದೇವಿ, ನಿಷ್ಕಾರಣವಾಗಿ ನನ್ನನ್ನು ಹೀಯ್ಯಾಳಿಸುವುದು ಸರಿಯಲ್ಲ. ವೇಷ ಸಾದೃಶ್ಯದಿಂದ ಮೋಸಹೋಗಿ ನೀನೇ ಎಂದು ತಿಳಿದು ನಾವು ಇಲ್ಲಿಗೆ ಬಂದೆವು. ಆದ್ದರಿಂದ ಕ್ಷಮಿಸು. (ಕಾಲುಗಳಿಗೆ ಬೀಳುತ್ತಾನೆ)

132 **ವಾಸವದತ್ತೆ** — (ರೋಷದಿಂದ) ಆರ್ಯಪುತ್ರ, ಏಳು ಏಳು. ಈಗಲೂ ಏಕೆ 'ಸಹಜವಾದ ಘನತೆಯಿಂದ ಉಂಟಾದ ಸೇವೆ' ಯಿಂದ ದುಃಖವನ್ನು ಅನುಭವಿಸುತ್ತೀ ?

133 **ರಾಜ** -- (ಆತ್ಮಗತ) ದೇವಿಗೆ ಇದೂ ಕೇಳಿಸಿಬಿಟ್ಟಿತೇ ? ಹಾಗಾದರೆ ದೇವಿಯನ್ನು ಪ್ರಸನ್ನ ಗೊಳಿಸುವ ವಿಷಯದಲ್ಲಿ ಸರ್ವಥಾ ನಿರಾಶರಾಗಿಬಿಟ್ಟೆವು. (ಮುಖ ತಗ್ಗಿಸಿಕೊಂಡು ನಿಲ್ಲುತ್ತಾನೆ)

134 **ವಿದೂಷಕ** — ಪೂಜ್ಯಳೆ, ನೀನೇ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೀಯೆ ಎಂದು ವೇಷಸಾದೃಶ್ಯದಿಂದ ಭ್ರಾಂತಿಗೊಂಡ ನಾನು

ಪ್ರಿಯವಯಸ್ಯನನ್ನು ಇಲ್ಲಿಗೆ ಕರೆತಂದೆ. ನನ್ನ ಮಾತನ್ನು ನಂಬದಿದ್ದರೆ, ಈ ಲತಾಪಾಶವನ್ನಾದರೂ ನೋಡು. (ಲತಾಪಾಶವನ್ನು ತೋರಿಸುತ್ತಾನೆ)

135 **ವಾಸವದತ್ತೆ**—(ಕೋಪದಿಂದ) ಕಾಂಚನಮಾಲೆ, ಇದೇ ಲತಾಪಾಶದಿಂದ ಈ ಬ್ರಾಹ್ಮಣನನ್ನು ಬಂಧಿಸಿ ಹಿಡಿದುಕೋ. ಈ ದುಷ್ಟಕನ್ಯೆಯನ್ನೂ ಮುಂದೆ ನಿಲ್ಲಿಸು.

136 **ಕಾಂಚನಮಾಲೆ**—ಒಡತಿಯ ಅಪ್ಪಣೆಯಂತೆ. (ಲತಾಪಾಶದಿಂದ ವಸಂತಕನನ್ನು ಕುತ್ತಿಗೆಯಲ್ಲಿ ಬಂಧಿಸಿ, ಹೊಡೆಯುತ್ತಾಳೆ) ಹತಾಶ, ನಿನ್ನ ದುರ್ನಡತೆಯ ಫಲವನ್ನನುಭವಿಸು. 'ಮಹಾರಾಣಿಯ ದುಷ್ಟವಚನಗಳಿಂದ ಕಿವಿಗಳು ಸಿಡಿದು ಹೋಗಿವೆ' ಎಂಬ ಆ (ನಿನ್ನ) ಮಾತನ್ನು ಸ್ಮರಿಸಿಕೋ. ಸಾಗರಿಕೆ, ನೀನೂ ಮುಂದೆ ನಿಲ್ಲು.

137 **ಸಾಗರಿಕೆ**—(ಸ್ವಗತ) ಪುಣ್ಯಹೀನೆಯಾದ ನನಗೆ ನನ್ನ ಇಷ್ಟದಂತೆಯೇ ಸಾಯಲೂ ಸಾಧ್ಯವಾಗಲಿಲ್ಲವಲ್ಲಾ!

138 **ವಿದೂಷಕ**—(ವಿಷಾದದಿಂದ) ವಯಸ್ಯ, ದೇವಿಯ ಬಂಧನದಿಂದ ವಿಪತ್ತಿಗೀಡಾಗುತ್ತಿರುವ ಅನಾಥನಾದ ನನ್ನನ್ನು ನೆನಪಿನಲ್ಲಿಟ್ಟುಕೋ. (ಎಂದು ರಾಜನನ್ನು ನೋಡುತ್ತಾನೆ. ವಾಸವದತ್ತೆಯು ರಾಜನನ್ನು ನೋಡುತ್ತಿರುವ ಸಾಗರಿಕೆಯನ್ನೂ ವಸಂತಕನನ್ನೂ ಕರೆದುಕೊಂಡು ಕಾಂಚನಮಾಲೆಯೊಡನೆ ಹೋಗುತ್ತಾಳೆ.)

139 **ರಾಜ**—(ಖೇದದಿಂದ) ಕಷ್ಟ, ಕಷ್ಟ!

140 ದೀರ್ಘರೋಷದಿಂದ ಸ್ನೇಹಪೂರ್ಣವೆಲ್ಲ ಗುವೆಲ್ಲಾ ಅಪಹೃತವಾಗಿರುವ ದೇವಿಯ ಆ ಮುಖವನ್ನು ಕುರಿತು ಯೋಚಿಸಲೇ? ಸಕಾರಣವಾಗಿ ಹೆಚ್ಚಿರುವ ಕೋಪವುಳ್ಳ ದೇವಿಯಿಂದ ಹೆದರಿಸಲ್ಪಡುತ್ತಿರುವ, ಮೊದಲೇ ಭೀತಳಾಗಿದ್ದ ಸಾಗರಿಕೆಯನ್ನು ಕುರಿತು ಯೋಚಿಸಲೇ? ಅಥವಾ ಬಂಧಿತನಾಗಿ ಇಲ್ಲಿಂದ ಹೋದ ವಸಂತಕನನ್ನು ಕುರಿತು ಚಿಂತಿಸಲೇ? ಎಲ್ಲಾ ಬಗೆಯಲ್ಲೂ ವ್ಯಥೆಗೊಂಡವನಾಗಿ ಕ್ಷಣಕಾಲವೂ ಶಾಂತಿಯನ್ನು ಹೊಂದಲಾರದಾಗಿದ್ದೇನೆ. ||೧೯||

141 ಆದ್ದರಿಂದ ಇಲ್ಲಿದ್ದು ಈಗ ಪ್ರಯೋಜನವೇನು? ದೇವಿಯನ್ನೇ ಪ್ರಸನ್ನಗೊಳಿಸಲು ಅಂತಃಪುರಕ್ಕೇ ಹೋಗುತ್ತೇನೆ.

(ಎಲ್ಲರೂ ಹೋಗುತ್ತಾರೆ.)

**ಇಂತು ಸಂಕೇತಕ ಎಂಬ ಮೂರನೆಯ ಅಂಕ**

# ಅಂಕ ೪

1 (ಬಳಿಕ ಸುಸಂಗತೆ ಕಣ್ಣೀರಿಂದ ಕೂಡಿ, ರತ್ನಮಾಲೆ ಹಿಡಿದುಕೊಂಡು ಪ್ರವೇಶಿಸುತ್ತಾಳೆ)

2 **ಸುಸಂಗತೆ**— (ಕರುಣೆಯಿಂದ ನಿಟ್ಟುಸಿರುಬಿಟ್ಟು) ಹಾ ಪ್ರಿಯಸಖಿ ಸಾಗರಿಕೆ! ಹಾ ಲಜ್ಜಾಶೀಲೆ! ಹಾ ಸಖೀಜನವತ್ಸಲೆ! ಹಾ ಉದಾರಸ್ವಭಾವದವಳೆ! ಹಾ ಸೌಮ್ಯದರ್ಶನೆ! ಎಲ್ಲಿ ಹೋದೆ? ಉತ್ತರ ಕೊಡು. (ಅಳುತ್ತಾಳೆ. ಮೇಲೆನೋಡಿ, ನಿಟ್ಟುಸಿರು ಬಿಟ್ಟು) ಅಯ್ಯೋ ಹಾಳು ವಿಧಿಯೇ! ಕರುಣೆಯಿಲ್ಲದವನೇ! ಅಸಾಧಾರಣವಾದ ರೂಪಲಾವಣ್ಯವುಳ್ಳಂತಹವಳನ್ನಾಗಿ ನಿರ್ಮಿಸಿಯೂ ಅದೇಕೆ ಅವಳಿಗೆ ಈ ಬಗೆಯ ಅವಸ್ಥೆಯನ್ನು ತಂದಿಟ್ಟೆ? ಜೀವಿತದಲ್ಲಿ ನಿರಾಶೆಗೊಂಡ ಅವಳು ಈ ರತ್ನಮಾಲೆಯನ್ನು 'ಯಾವನಾದರೂ ಬ್ರಾಹ್ಮಣನ ಕೈಯಲ್ಲಿಡು' ಎಂದು ಹೇಳಿ ನನ್ನ ವಶಕ್ಕೆ ಒಪ್ಪಿಸಿದ್ದಾಳೆ. ಆದ್ದರಿಂದ ಯಾವನಾದರೂ ಬ್ರಾಹ್ಮಣನನ್ನು ಹುಡುಕುತ್ತೇನೆ. (ತೆರೆಯ ಕಡೆ ನೋಡಿ) ಓ, ಇಗೋ ಈ ಬ್ರಾಹ್ಮಣ ವಸಂತಕ ಇಲ್ಲಿಗೇ ಬರುತ್ತಿದ್ದಾನೆ. ಆದ್ದರಿಂದ ಇವನಿಗೇ ಕೊಟ್ಟುಬಿಡುತ್ತೇನೆ.

3 (ಬಳಿಕ ಹರ್ಷಗೊಂಡ ವಸಂತಕನು ಪ್ರವೇಶಿಸುತ್ತಾನೆ.)

4 **ವಿದೂಷಕ**— ಹೀ ಹೀ! ಭೋ ಭೋ! ಪ್ರಿಯ ವಯಸ್ಯನಿಂದ ಪ್ರಸಾದಿತಳಾದ ಮಹಾರಾಣಿ ವಾಸವದತ್ತೆಯಿಂದ ನಾನು ಬಂಧಮುಕ್ತನಾಗಿ ಆಕೆಯೇ ಕೈಯಾರ ಕೊಟ್ಟ ಕಡುಬು-ಲಡ್ಡುಗಳನ್ನು ಹೊಟ್ಟೆಗೆ ಭರ್ತಿಮಾಡಿದೆ. ಅದೂ ಅಲ್ಲದೆ ಈ ರೇಷ್ಮೆವಸ್ತ್ರಗಳಜತೆ ಮುತ್ತು ಕಿವಿಯ ಆಭರಣಗಳನ್ನೂ ಕೊಟ್ಟಿದ್ದಾಳೆ. ಇನ್ನು ಈಗ ಪ್ರಿಯವಯಸ್ಯನನ್ನು ನೋಡುತ್ತೇನೆ. (ಹೋಗುತ್ತಾನೆ)

5 **ಸುಸಂಗತೆ**— (ಅಳುತ್ತಾ, ಇದ್ದಕ್ಕಿದ್ದಂತೆ ಹತ್ತಿರಕ್ಕೆ ಹೋಗಿ) ಆರ್ಯ ವಸಂತಕ, ಸ್ವಲ್ಪ ನಿಂತುಕೋ.

6 **ವಿದೂಷಕ**— (ನೋಡಿ) ಇದೇನು ಸುಸಂಗತೆ! ಇದೇಕೆ ಇಲ್ಲಿ ಅಳುತ್ತಿದ್ದೀ, ಸುಸಂಗತೆ? ಸಾಗರಿಕೆಗೆ ಅನಾಹುತವೇನೂ ಉಂಟಾಗಿಲ್ಲ ತಾನೇ?

7 **ಸುಸಂಗತೆ**— ಇದನ್ನೇ ಹೇಳಬೇಕೆಂದಿದ್ದೇನೆ. ಪಾಪ! ಆಕೆಯನ್ನು ಉಜ್ಜಯಿನಿಗೆ ಕಳುಹಿಸಲಾಗಿದೆಯೆಂದು ಪ್ರವಾದ ಹುಟ್ಟಿಸಿ, ದೇವಿಯು ಅರ್ಧರಾತ್ರಿಯ ಸಮಯದಲ್ಲಿ ಎಲ್ಲಿಗೆ ಕರೆದುಕೊಂಡುಹೋದಳೋ ತಿಳಿಯದು.

8 **ವಿದೂಷಕ**— (ತವಕದಿಂದ) ಹಾ ಪೂಜ್ಯೆ ಸಾಗರಿಕೆ! ದೇವಿಯು ಈಗ ತುಂಬಾ ನಿರ್ದಯವಾದ ಕೆಲಸ ಮಾಡಿಬಿಟ್ಟಿದ್ದಾಳೆ. ಆಮೇಲೆ?

9 **ಸುಸಂಗತೆ**— ಜೀವಿತದಲ್ಲಿ ನಿರಾಶೆಗೊಂಡ ಅವಳು 'ಈ ರತ್ನಮಾಲೆಯನ್ನು ಆರ್ಯ ವಸಂತಕನ ಕೈಯಲ್ಲಿಡು' ಎಂದು ಹೇಳಿ ನನ್ನ ವಶಕ್ಕೆ ಕೊಟ್ಟಳು. ಆದ್ದರಿಂದ, ಆರ್ಯ, ಇದನ್ನು ತೆಗೆದುಕೋ.

10 **ವಿದೂಷಕ**— (ಕಣ್ಣೀರಿಡುತ್ತಾ, ದಯೆಯಿಂದ ಕೂಡಿ) ಆರ್ಯೆ, ಈ ಬಗೆಯ ಸಂದರ್ಭದಲ್ಲಿ ನನ್ನ ಕೈ ಮುಂದೆ ಬರುವುದಿಲ್ಲ. (ಇಬ್ಬರೂ ಅಳುತ್ತಾರೆ)

11 **ಸುಸಂಗತೆ**—(ಕೈ ಮುಗಿದುಕೊಂಡು) ಅವಳ ಮೇಲೆ ಅನುಗ್ರಹ ಮಾಡುವುದಕ್ಕಾಗಿ ಇದನ್ನು ಆರ್ಯನು ಅಂಗೀಕರಿಸೋಣವಾಗಲಿ.

12 **ವಿದೂಷಕ**—(ಚಿಂತಿಸಿ) ಅಥವಾ, ಕೊಡು. ಸಾಗರಿಕೆಯ ವಿರಹದಿಂದ ಕುಗ್ಗಿಹೋಗಿರುವ ಪ್ರಿಯವಯಸ್ಯನನ್ನು ಇದರಿಂದಲಾದರೂ ವಿನೋದಗೊಳಿಸುತ್ತೇನೆ. (ಸುಸಂಗತೆ ರತ್ನಮಾಲೆಯನ್ನು ವಸಂತಕನ ಕೈಗೆ ಕೊಡುತ್ತಾಳೆ. ತೆಗೆದುಕೊಂಡು ವಿಸ್ಮಯದಿಂದ) ಪೂಜ್ಯಳೇ, ಇಂತಹ ಅಲಂಕಾರ ಅವಳಿಗೆಲ್ಲಿಂದ ಬಂತು?

13 **ಸುಸಂಗತೆ**— ಆರ್ಯ, ನಾನೂ ಕುತೂಹಲದಿಂದ ಅವಳನ್ನು ಕೇಳಿದೆ.

14 **ವಿದೂಷಕ**— ಅದಕ್ಕೆ ಅವಳೇನು ಹೇಳಿದಳು?

15 **ಸುಸಂಗತೆ**—ಆಗ ಅವಳು ಮೇಲ್ಗಡೆ ನೋಡಿ ದೀರ್ಘವಾಗಿ ನಿಟ್ಟುಸಿರು ಬಿಟ್ಟು, 'ಈಗ ಈ ಕಥೆಯಿಂದ ನಿನಗೇನು ಪ್ರಯೋಜನ?' ಎಂದು ಹೇಳಿ, ಅಳತೊಡಗಿದಳು.

16 **ವಿದೂಷಕ**— ಸಾಮಾನ್ಯಜನರಿಗೆ ದುರ್ಲಭವಾದ ಈ ಆಭರಣವೇ 'ಈಕೆ ದೊಡ್ಡವಂಶದಲ್ಲಿ ಹುಟ್ಟಿರಬೇಕು' ಎಂದು ಹೇಳುತ್ತಿದೆಯಲ್ಲವೇ? ಸುಸಂಗತೆ, ನನ್ನ ಪ್ರಿಯವಯಸ್ಯ ಈಗ ಎಲ್ಲಿ?

17 **ಸುಸಂಗತೆ**— ಆರ್ಯ, ಈಗ ತಾನೇ ಮಹಾರಾಜರು ದೇವಿಯವರ ಭವನದಿಂದ ಹೊರಟು ಸ್ಫಟಿಕಶಿಲಾಮಂಟಪಕ್ಕೆ ಹೋದರು. ಆದ್ದರಿಂದ ಆರ್ಯನು ಹೋಗೋಣವಾಗಲಿ. ನಾನೂ ದೇವೀವಾಸವದತ್ತೆಯ ಪರಿಚಾರಿಣಿಯಾಗುತ್ತೇನೆ.

**ಇಂತು ಪ್ರವೇಶಕ**

18 (ಬಳಿಕ ಆಸನಸ್ಥನಾದ ರಾಜನು ಪ್ರವೇಶಿಸುತ್ತಾನೆ)

19 **ರಾಜ**— (ಆಲೋಚಿಸಿ)

ಅತ್ತು ಅತ್ತು ಕಣ್ಣೀರಿನಿಂದ ತೊಳೆದುಬಿಟ್ಟಳೋ ಎಂಬಂತೆ ಕೋಪವನ್ನು
ತಾನೇ ತೊಡೆದುಹಾಕಿ ದೇವಿಯು ಪ್ರಸನ್ನತೆಯನ್ನು ಎಷ್ಟರ ಮಟ್ಟಿಗೆ ಹೊಂದಿ

125 **ವಿದೂಷಕ** — ಪೂಜ್ಯೆಸಾಗರಿಕೆ, ಸಮಾಧಾನಗೊಂಡು ಪ್ರಿಯವಯಸ್ಯನನ್ನು ಮಾತಾಡಿಸು.

126 **ವಾಸವದತ್ತೆ** — (ಕಿವಿಗೊಟ್ಟು ಕೇಳಿ ವಿಷಾದದಿಂದ) ಕಾಂಚನಮಾಲೆ, ಸಾಗರಿಕೆಯೂ ಇಲ್ಲಿದ್ದಾಳೆ. ಆದ್ದರಿಂದ ಆಲಿಸೋಣ. ತಿಳಿದುಕೊಂಡು ಆ ಮೇಲೆ ಹತ್ತಿರಕ್ಕೆ ಹೋಗುತ್ತೇನೆ. (ಹಾಗೆಯೇ ಮಾಡುತ್ತಾಳೆ)

127 **ಸಾಗರಿಕೆ** — ಮಹಾರಾಜ, ಈ ಸುಳ್ಳು ದಾಕ್ಷಿಣ್ಯದಿಂದೇನು ? ಪ್ರಾಣಕ್ಕಿಂತ ಹೆಚ್ಚು ವಲ್ಲಭೆಯಾಗಿರುವ ಮಹಾರಾಣಿಯ ಬಗ್ಗೆ ಪುನಃ ನನ್ನನ್ನು ಅಪರಾಧಿನಿಯಾಗುವಂತೇಕೆ ಮಾಡುತ್ತೀರಿ ?

128 **ರಾಜ** — ಎಲೌ, ನೀನು ಸುಳ್ಳು ಹೇಳುವವಳಾಗಿಬಿಟ್ಟೆ. ಯಾಕೆಂದರೆ—

129 ಅವಳೆರಡು ಸ್ತನಗಳು ನಿಟ್ಟುಸಿರಿನಿಂದ ಅದಿರುತ್ತಿರಲಾಗಿ, ನಾನು ಕಂಪಿಸಿದೆ. ಮೌನವಾಗಿದ್ದಾಗ ಪ್ರಿಯವಚನಗಳನ್ನಾಡಿದೆ. ಅವಳ ಮುಖವು ಹುಬ್ಬುಗಂಟುಹಾಕಿರಲು ನಾನು ಹಾಗೆಯೇ ಅವಳ ಕಾಲಿಗೆರಗಿದೆ. ಹೀಗೆ ನಾನು ದೇವಿಗೆ ಮಾಡಿದುದೆಲ್ಲವೂ ಅವಳ ಸಹಜವಾದ ಘನತೆಯಿಂದ ಉಂಟಾದ ಸೇವೆಯೇ. ಆದರೆ ಪ್ರೇಮದ ಕಟ್ಟಿನಿಂದ ಬೆಳೆದು ಹೆಚ್ಚಿದ ರಸವುಳ್ಳ ಪ್ರೀತಿಯೆಂಬುದು ಮಾತ್ರ ನಿನ್ನಲ್ಲೇ (ಬೇರೂರಿ) ಇದೆ. || ೧೮ ||

130 **ವಾಸವದತ್ತೆ** — (ಹತ್ತಿರ ಹೋಗಿ ರೋಷದಿಂದ) ಆರ್ಯಪುತ್ರ, ಇದು (ನಿನಗೆ) ತಕ್ಕದ್ದು !

131 **ರಾಜ** — (ನೋಡಿ, ಬೆಪ್ಪಾಗಿ) ದೇವಿ, ನಿಷ್ಕಾರಣವಾಗಿ ನನ್ನನ್ನು ಹೀಯ್ಯಾಳಿಸುವುದು ಸರಿಯಲ್ಲ. ವೇಷ ಸಾದೃಶ್ಯದಿಂದ ಮೋಸಹೋಗಿ ನೀನೇ ಎಂದು ತಿಳಿದು ನಾವು ಇಲ್ಲಿಗೆ ಬಂದೆವು. ಆದ್ದರಿಂದ ಕ್ಷಮಿಸು. (ಕಾಲುಗಳಿಗೆ ಬೀಳುತ್ತಾನೆ)

132 **ವಾಸವದತ್ತೆ** — (ರೋಷದಿಂದ) ಆರ್ಯಪುತ್ರ, ಏಳು ಏಳು. ಈಗಲೂ ಏಕೆ 'ಸಹಜವಾದ ಘನತೆಯಿಂದ ಉಂಟಾದ ಸೇವೆ' ಯಿಂದ ದುಃಖವನ್ನು ಅನುಭವಿಸುತ್ತೀ ?

133 **ರಾಜ** — (ಆತ್ಮಗತ) ದೇವಿಗೆ ಇದೂ ಕೇಳಿಸಿಬಿಟ್ಟಿತೇ ? ಹಾಗಾದರೆ ದೇವಿಯನ್ನು ಪ್ರಸನ್ನಗೊಳಿಸುವ ವಿಷಯದಲ್ಲಿ ಸರ್ವಥಾ ನಿರಾಶರಾಗಿಬಿಟ್ಟೆವು. (ಮುಖ ತಗ್ಗಿಸಿಕೊಂಡು ನಿಲ್ಲುತ್ತಾನೆ)

134 **ವಿದೂಷಕ** — ಪೂಜ್ಯಳೆ, ನೀನೇ ನೇಣುಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದೀಯೆ ಎಂದು ವೇಷಸಾದೃಶ್ಯದಿಂದ ಭ್ರಾಂತಿಗೊಂಡ ನಾನು

ಪ್ರಿಯವಯಸ್ಯನನ್ನು ಇಲ್ಲಿಗೆ ಕರೆತಂದೆ. ನನ್ನ ಮಾತನ್ನು ನಂಬದಿದ್ದರೆ, ಈ ಲತಾಪಾಶವನ್ನಾದರೂ ನೋಡು. (ಲತಾಪಾಶವನ್ನು ತೋರಿಸುತ್ತಾನೆ)

135 **ವಾಸವದತ್ತೆ**—(ಕೋಪದಿಂದ) ಕಾಂಚನಮಾಲೆ, ಇದೇ ಲತಾಪಾಶದಿಂದ ಈ ಬ್ರಾಹ್ಮಣನನ್ನು ಬಂಧಿಸಿ ಹಿಡಿದುಕೋ. ಈ ದುಷ್ಟಕನ್ಯೆಯನ್ನೂ ಮುಂದೆ ನಿಲ್ಲಿಸು.

136 **ಕಾಂಚನಮಾಲೆ**—ಒಡತಿಯ ಅಪ್ಪಣೆಯಂತೆ. (ಲತಾಪಾಶದಿಂದ ವಸಂತಕನನ್ನು ಕುತ್ತಿಗೆಯಲ್ಲಿ ಬಂಧಿಸಿ, ಹೊಡೆಯುತ್ತಾಳೆ) ಹತಾಶ, ನಿನ್ನ ದುರ್ನಡತೆಯ ಫಲವನ್ನನುಭವಿಸು. 'ಮಹಾರಾಣಿಯ ದುಷ್ಟವಚನಗಳಿಂದ ಕಿವಿಗಳು ಸಿಡಿದು ಹೋಗಿವೆ' ಎಂಬ ಆ (ನಿನ್ನ) ಮಾತನ್ನು ಸ್ಮರಿಸಿಕೋ. ಸಾಗರಿಕೆ, ನೀನೂ ಮುಂದೆ ನಿಲ್ಲು.

137 **ಸಾಗರಿಕೆ**—(ಸ್ವಗತ) ಪುಣ್ಯಹೀನೆಯಾದ ನನಗೆ ನನ್ನ ಇಷ್ಟದಂತೆಯೇ ಸಾಯಲೂ ಸಾಧ್ಯವಾಗಲಿಲ್ಲವಲ್ಲಾ!

138 **ವಿದೂಷಕ**—(ವಿಷಾದದಿಂದ) ವಯಸ್ಯ, ದೇವಿಯ ಬಂಧನದಿಂದ ವಿಪತ್ತಿಗೀಡಾಗುತ್ತಿರುವ ಅನಾಥನಾದ ನನ್ನನ್ನು ನೆನಪಿನಲ್ಲಿಟ್ಟುಕೋ. (ಎಂದು ರಾಜನನ್ನು ನೋಡುತ್ತಾನೆ. ವಾಸವದತ್ತೆಯು ರಾಜನನ್ನು ನೋಡುತ್ತಿರುವ ಸಾಗರಿಕೆಯನ್ನೂ ವಸಂತಕನನ್ನೂ ಕರೆದುಕೊಂಡು ಕಾಂಚನಮಾಲೆಯೊಡನೆ ಹೋಗುತ್ತಾಳೆ.)

139 **ರಾಜ**—(ಖೇದದಿಂದ) ಕಷ್ಟ, ಕಷ್ಟ!

140 ದೀರ್ಘರೋಷದಿಂದ ಸ್ನೇಹಪೂರ್ಣವೆಲ್ಲ ಗುವೆಲ್ಲಾ ಅಪಹೃತವಾಗಿರುವ ದೇವಿಯ ಆ ಮುಖವನ್ನು ಕುರಿತು ಯೋಚಿಸಲೇ? ಸಕಾರಣವಾಗಿ ಹೆಚ್ಚಿರುವ ಕೋಪವುಳ್ಳ ದೇವಿಯಿಂದ ಹೆದರಿಸಲ್ಪಡುತ್ತಿರುವ, ಮೊದಲೇ ಭೀತಳಾಗಿದ್ದ ಸಾಗರಿಕೆಯನ್ನು ಕುರಿತು ಯೋಚಿಸಲೇ? ಅಥವಾ ಬಂಧಿತನಾಗಿ ಇಲ್ಲಿಂದ ಹೋದ ವಸಂತಕನನ್ನು ಕುರಿತು ಚಿಂತಿಸಲೇ? ಎಲ್ಲಾ ಬಗೆಯಲ್ಲೂ ವ್ಯಥೆಗೊಂಡವನಾಗಿ ಕ್ಷಣಕಾಲವೂ ಶಾಂತಿಯನ್ನು ಹೊಂದಲಾರದಾಗಿದ್ದೇನೆ. ||೧೯||

141 ಆದ್ದರಿಂದ ಇಲ್ಲಿದ್ದು ಈಗ ಪ್ರಯೋಜನವೇನು? ದೇವಿಯನ್ನೇ ಪ್ರಸನ್ನಗೊಳಿಸಲು ಅಂತಃಪುರಕ್ಕೇ ಹೋಗುತ್ತೇನೆ.

(ಎಲ್ಲರೂ ಹೋಗುತ್ತಾರೆ.)

**ಇಂತು ಸಂಕೇತಕ ಎಂಬ ಮೂರನೆಯ ಅಂಕ**

# ಅಂಕ ೪

[1](ಬಳಿಕ ಸುಸಂಗತೆ ಕಣ್ಣೀರಿಂದ ಕೂಡಿ, ರತ್ನಮಾಲೆ ಹಿಡಿದುಕೊಂಡು ಪ್ರವೇಶಿಸುತ್ತಾಳೆ)

[2] **ಸುಸಂಗತೆ**— (ಕರುಣೆಯಿಂದ ನಿಟ್ಟುಸಿರುಬಿಟ್ಟು) ಹಾ ಪ್ರಿಯಸಖಿ ಸಾಗರಿಕೆ! ಹಾ ಲಜ್ಜಾಶೀಲೆ! ಹಾ ಸಖೀಜನವತ್ಸಲೆ! ಹಾ ಉದಾರಸ್ವಭಾವದವಳೆ! ಹಾ ಸೌಮ್ಯದರ್ಶನೆ! ಎಲ್ಲಿ ಹೋದೆ? ಉತ್ತರ ಕೊಡು. (ಅಳುತ್ತಾಳೆ. ಮೇಲೆನೋಡಿ, ನಿಟ್ಟುಸಿರು ಬಿಟ್ಟು) ಅಯ್ಯೋ ಹಾಳು ವಿಧಿಯೇ! ಕರುಣೆಯಿಲ್ಲದವನೇ! ಅಸಾಧಾರಣವಾದ ರೂಪಲಾವಣ್ಯವುಳ್ಳಂತಹವಳನ್ನಾಗಿ ನಿರ್ಮಿಸಿಯೂ ಅದೇಕೆ ಅವಳಿಗೆ ಈ ಬಗೆಯ ಅವಸ್ಥೆಯನ್ನು ತಂದಿಟ್ಟೆ? ಜೀವಿತದಲ್ಲಿ ನಿರಾಶೆಗೊಂಡ ಅವಳು ಈ ರತ್ನಮಾಲೆಯನ್ನು 'ಯಾವನಾದರೂ ಬ್ರಾಹ್ಮಣನ ಕೈಯಲ್ಲಿಡು' ಎಂದು ಹೇಳಿ ನನ್ನ ವಶಕ್ಕೆ ಒಪ್ಪಿಸಿದ್ದಾಳೆ. ಆದ್ದರಿಂದ ಯಾವನಾದರೂ ಬ್ರಾಹ್ಮಣನನ್ನು ಹುಡುಕುತ್ತೇನೆ. (ತೆರೆಯ ಕಡೆ ನೋಡಿ) ಓ, ಇಗೋ ಈ ಬ್ರಾಹ್ಮಣ ವಸಂತಕ ಇಲ್ಲಿಗೇ ಬರುತ್ತಿದ್ದಾನೆ. ಆದ್ದರಿಂದ ಇವನಿಗೇ ಕೊಟ್ಟುಬಿಡುತ್ತೇನೆ.

[3] (ಬಳಿಕ ಹರ್ಷಗೊಂಡ ವಸಂತಕನು ಪ್ರವೇಶಿಸುತ್ತಾನೆ.)

[4] **ವಿದೂಷಕ**— ಹೀ ಹೀ! ಭೋ ಭೋ! ಪ್ರಿಯ ವಯಸ್ಯನಿಂದ ಪ್ರಸಾದಿತಳಾದ ಮಹಾರಾಣಿ ವಾಸವದತ್ತೆಯಿಂದ ನಾನು ಬಂಧಮುಕ್ತನಾಗಿ ಆಕೆಯೇ ಕೈಯಾರ ಕೊಟ್ಟ ಕಡುಬು–ಲಡ್ಡುಗಳನ್ನು ಹೊಟ್ಟೆಗೆ ಭರ್ತಿಮಾಡಿದೆ. ಅದೂ ಅಲ್ಲದೆ ಈ ರೇಷ್ಮೆವಸ್ತ್ರಗಳಜತೆ ಮುತ್ತು ಕಿವಿಯ ಆಭರಣಗಳನ್ನೂ ಕೊಟ್ಟಿದ್ದಾಳೆ. ಇನ್ನು ಈಗ ಪ್ರಿಯವಯಸ್ಯನನ್ನು ನೋಡುತ್ತೇನೆ. (ಹೋಗುತ್ತಾನೆ)

[5] **ಸುಸಂಗತೆ**—(ಅಳುತ್ತಾ, ಇದ್ದಕ್ಕಿದ್ದಂತೆ ಹತ್ತಿರಕ್ಕೆ ಹೋಗಿ) ಆರ್ಯ ವಸಂತಕ, ಸ್ವಲ್ಪ ನಿಂತುಕೋ.

[6] **ವಿದೂಷಕ**—(ನೋಡಿ) ಇದೇನು ಸುಸಂಗತೆ! ಇದೇಕೆ ಇಲ್ಲಿ ಅಳುತ್ತಿದ್ದೀ, ಸುಸಂಗತೆ? ಸಾಗರಿಕೆಗೆ ಅನಾಹುತವೇನೂ ಉಂಟಾಗಿಲ್ಲ ತಾನೇ?

[7] **ಸುಸಂಗತೆ**— ಇದನ್ನೇ ಹೇಳಬೇಕೆಂದಿದ್ದೇನೆ. ಪಾಪ! ಆಕೆಯನ್ನು ಉಜ್ಜಯಿನಿಗೆ ಕಳುಹಿಸಲಾಗಿದೆಯೆಂದು ಪ್ರವಾದ ಹುಟ್ಟಿಸಿ, ದೇವಿಯು ಅರ್ಧರಾತ್ರಿಯ ಸಮಯದಲ್ಲಿ ಎಲ್ಲಿಗೆ ಕರೆದುಕೊಂಡುಹೋದಳೋ ತಿಳಿಯದು.

[8] **ವಿದೂಷಕ**— (ತವಕದಿಂದ) ಹಾ ಪೂಜ್ಯೆ ಸಾಗರಿಕೆ! ದೇವಿಯು ಈಗ ತುಂಬಾ ನಿರ್ದಯವಾದ ಕೆಲಸ ಮಾಡಿಬಿಟ್ಟಿದ್ದಾಳೆ. ಆಮೇಲೆ?

9 **ಸುಸಂಗತೆ**— ಜೀವಿತದಲ್ಲಿ ನಿರಾಶೆಗೊಂಡ ಅವಳು 'ಈ ರತ್ನಮಾಲೆಯನ್ನು ಆರ್ಯ ವಸಂತಕನ ಕೈಯಲ್ಲಿಡು' ಎಂದು ಹೇಳಿ ನನ್ನ ವಶಕ್ಕೆ ಕೊಟ್ಟಳು. ಆದ್ದರಿಂದ, ಆರ್ಯ, ಇದನ್ನು ತೆಗೆದುಕೋ.

10 **ವಿದೂಷಕ**— (ಕಣ್ಣೀರಿಡುತ್ತಾ, ದಯೆಯಿಂದ ಕೂಡಿ) ಆರ್ಯೆ, ಈ ಬಗೆಯ ಸಂದರ್ಭದಲ್ಲಿ ನನ್ನ ಕೈ ಮುಂದೆ ಬರುವುದಿಲ್ಲ. (ಇಬ್ಬರೂ ಅಳುತ್ತಾರೆ)

11 **ಸುಸಂಗತೆ**—(ಕೈ ಮುಗಿದುಕೊಂಡು) ಅವಳ ಮೇಲೆ ಅನುಗ್ರಹ ಮಾಡುವುದಕ್ಕಾಗಿ ಇದನ್ನು ಆರ್ಯನು ಅಂಗೀಕರಿಸೋಣವಾಗಲಿ.

12 **ವಿದೂಷಕ**—(ಚಿಂತಿಸಿ) ಅಥವಾ, ಕೊಡು. ಸಾಗರಿಕೆಯ ವಿರಹದಿಂದ ಕುಗ್ಗಿಹೋಗಿರುವ ಪ್ರಿಯವಯಸ್ಯನನ್ನು ಇದರಿಂದಲಾದರೂ ವಿನೋದಗೊಳಿಸುತ್ತೇನೆ. (ಸುಸಂಗತೆ ರತ್ನಮಾಲೆಯನ್ನು ವಸಂತಕನ ಕೈಗೆ ಕೊಡುತ್ತಾಳೆ. ತೆಗೆದುಕೊಂಡು ವಿಸ್ಮಯದಿಂದ) ಪೂಜ್ಯಳೇ, ಇಂತಹ ಅಲಂಕಾರ ಅವಳಿಗೆಲ್ಲಿಂದ ಬಂತು?

13 **ಸುಸಂಗತೆ**— ಆರ್ಯ, ನಾನೂ ಕುತೂಹಲದಿಂದ ಅವಳನ್ನು ಕೇಳಿದೆ.

14 **ವಿದೂಷಕ**— ಅದಕ್ಕೆ ಅವಳೇನು ಹೇಳಿದಳು?

15 **ಸುಸಂಗತೆ**—ಆಗ ಅವಳು ಮೇಲ್ಗಡೆ ನೋಡಿ ದೀರ್ಘವಾಗಿ ನಿಟ್ಟುಸಿರುಬಿಟ್ಟು, 'ಈಗ ಈ ಕಥೆಯಿಂದ ನಿನಗೇನು ಪ್ರಯೋಜನ?' ಎಂದು ಹೇಳಿ, ಅಳತೊಡಗಿದಳು.

16 **ವಿದೂಷಕ**— ಸಾಮಾನ್ಯಜನರಿಗೆ ದುರ್ಲಭವಾದ ಈ ಆಭರಣವೇ 'ಈಕೆ ದೊಡ್ಡವಂಶದಲ್ಲಿ ಹುಟ್ಟಿರಬೇಕು' ಎಂದು ಹೇಳುತ್ತಿದೆಯಲ್ಲವೇ? ಸುಸಂಗತೆ, ನನ್ನ ಪ್ರಿಯವಯಸ್ಯ ಈಗ ಎಲ್ಲಿ?

17 **ಸುಸಂಗತೆ**— ಆರ್ಯ, ಈಗ ತಾನೇ ಮಹಾರಾಜರು ದೇವಿಯವರ ಭವನದಿಂದ ಹೊರಟು ಸ್ಫಟಿಕಶಿಲಾಮಂಟಪಕ್ಕೆ ಹೋದರು. ಆದ್ದರಿಂದ ಆರ್ಯನು ಹೋಗೋಣಾಗಲಿ. ನಾನೂ ದೇವೀವಾಸವದತ್ತೆಯ ಪರಿಚಾರಿಣಿಯಾಗುತ್ತೇನೆ.

**ಇಂತು ಪ್ರವೇಶಕ**

18 (ಬಳಿಕ ಆಸನಸ್ಥನಾದ ರಾಜನು ಪ್ರವೇಶಿಸುತ್ತಾನೆ)

19 **ರಾಜ** — (ಆಲೋಚಿಸಿ)

ಅತ್ತು ಅತ್ತು ಕಣ್ಣೀರಿನಿಂದ ತೊಳೆದುಬಿಟ್ಟಳೋ ಎಂಬಂತೆ ಕೋಪವನ್ನು ತಾನೇ ತೊಡೆದುಹಾಕಿ ದೇವಿಯು ಪ್ರಸನ್ನತೆಯನ್ನು ಎಷ್ಟರ ಮಟ್ಟಿಗೆ ಹೊಂದಿ

ದಳೋ ಅಷ್ಟನ್ನು (ನನ್ನ) ಸಂದಿಗ್ಧಾರ್ಥದ ಆಣೆಗಳಿಂದಾಗಲೀ, ಪ್ರಿಯವಚನ ಗಳಿಂದಾಗಲೀ, ವಿಶೇಷವಾಗಿ ಅವಳ ಇಷ್ಟಕ್ಕನುಗುಣವಾಗಿ ಆಚರಿಸುವುದ ರಿಂದಾಗಲೀ, ತುಂಬಾ ಸಂಕೋಚದಿಂದ ಕಂಗೆಟ್ಟಿದ್ದರಿಂದಾಗಲೀ, ಕಾಲಿಗೆ ಬೀಳುವುದರಿಂದಾಗಲೀ, ಪುನಃ ಪುನಃ ಸಖಿಯರಾಡಿದ ಮಾತುಗಳಿಂದಾಗಲೀ ಹೊಂದಲಿಲ್ಲ. ||೧||

20 (ವ್ಯಾಕುಲದಿಂದ ನಿಟ್ಟುಸಿರು ಬಿಟ್ಟು) ಈಗ ದೇವಿಯು ಪ್ರಸಾದಿತಳಾಗಿರಲಾಗಿ ಸಾಗರಿಕೆಯ ಚಿಂತೆಯೊಂದೇ ನನ್ನನ್ನು ಪೀಡಿಸುತ್ತಿದೆ. ಯಾಕೆಂದರೆ—

21 ಕಮಲದ ಒಳಭಾಗದಷ್ಟು ಸುಕುಮಾರವಾದ ಶರೀರವುಳ್ಳ ಆ ನನ್ನ ಪ್ರಿಯತಮೆಯು ಆಗ ಮೊದಮೊದಲನೆಯ ಅನುರಾಗದಿಂದ ಗಾಢವಾದ (ನನ್ನ) ಆಲಿಂಗನದಲ್ಲಿ ಕರಗಿಹೋಗಿ, ಅದೇ ಕ್ಷಣವೇ ಬಿದ್ದ ಮನ್ಮಥನ ಬಾಣಗಳಿಂದಾದ ಮಾರ್ಗಗಳಮೂಲಕ ನನ್ನ ಹೃದಯವನ್ನು ಪ್ರವೇಶಿಸಿಬಿಟ್ಟಳೆಂದು ಭಾವಿಸುತ್ತೇನೆ

22 (ಚಿಂತಿಸಿ) ನನ್ನ ವಿಶ್ವಾಸಪಾತ್ರನಾದ ಆ ವಸಂತಕನೂ ದೇವಿಯಿಂದ ಬಂಧಿತನಾಗಿಬಿಟ್ಟಿದ್ದಾನೆ. ಆದ್ದರಿಂದ ಯಾರ ಮುಂದೆ ಕಣ್ಣೀರು ಸುರಿಸಲಿ? (ನಿಟ್ಟುಸಿರು ಬಿಡುತ್ತಾನೆ)

(ಬಳಿಕ ವಸಂತಕನು ಪ್ರವೇಶಿಸುತ್ತಾನೆ)

23 **ವಿದೂಷಕ**—(ಮುಂದೆ ಹೋಗಿ, ನೋಡಿ) ಈ ನನ್ನ ಪ್ರಿಯವಯಸ್ಯನು ತುಂಬಿಹೋಗಿರುವ ವ್ಯಾಕುಲತೆಯಿಂದ ಕೃಶವಾಗಿದ್ದರೂ ಶ್ಲಾಘನೀಯವಾದ ಲಾವಣ್ಯವುಳ್ಳ ಶರೀರವುಳ್ಳವನಾಗಿ ಬಿದಿಗೆ ಚಂದ್ರನಂತೆ (ಎಂದಿಗಿಂತ) ಹೆಚ್ಚಾಗಿ ಶೋಭಿಸುತ್ತಿದ್ದಾನೆ. ಅವನ ಹತ್ತಿರಕ್ಕೇ ಹೋಗುತ್ತೇನೆ. (ಸಮೀಪಕ್ಕೆ ಹೋಗಿ) ನಿನಗೆ ಮಂಗಳವಾಗಲಿ. ನಿನ್ನ ಅದೃಷ್ಟ ಒಳ್ಳೆಯದಯ್ಯಾ! ಮಹಾರಾಣಿಯ ಹಸ್ತಗತನಾಗಿದ್ದ ನಾನು ಇದೇ ಕಣ್ಣುಗಳಿಂದ ನಿನ್ನನ್ನು ನೋಡುವಂತಾಯಿತಲ್ಲಾ

24 **ರಾಜ**—(ನೋಡಿ, ಹರ್ಷದಿಂದ) ಓ, ವಸಂತಕ ಬಂದು ಬಿಟ್ಟಿದ್ದಾನೆ! ಮಿತ್ರ, ನನ್ನನ್ನು ತಬ್ಬಿಕೋ.

25 **ವಿದೂಷಕ**—(ತಬ್ಬಿಕೊಂಡು) ವಯಸ್ಯ, ಮಹಾರಾಣಿಯಿಂದ ಅನುಗೃಹೀತನಾಗಿದ್ದೇನೆ!

26 **ರಾಜ**—ದೇವಿಯ ಪ್ರಸಾದ ನಿನ್ನ ಅಲಂಕಾರದಿಂದಲೇ ತಿಳಿಯಿತು. ಈಗ ಸಾಗರಿಕೆಯ ಸಮಾಚಾರ ಏನು ಎಂಬುದನ್ನು ಹೇಳು. (ವಿದೂಷಕನು ಸಂಕೋಚದಿಂದ ಕೆಳಗೆ ನೋಡುತ್ತಾನೆ.) ವಯಸ್ಯ, ಏನು ಮಾತೇ ಆಡುವುದಿಲ್ಲ?

27 **ವಿದೂಷಕ**—ಅಪ್ರಿಯವಾದುದರಿಂದ ನಿನಗೆ ತಿಳಿಸಲು ಶಕ್ತನಲ್ಲ.

28 **ರಾಜ** — (ಕಳವಳದಿಂದ) ವಯಸ್ಯ, ಏನು ಅಪ್ರಿಯವೇ? ಅಂದರೆ ಆಕೆ ಪ್ರಾಣ ನೀಗಿಬಿಟ್ಟಿದ್ದಾಳೆಂಬುದು ವ್ಯಕ್ತವಾಗಿಯೇ ಇದೆ. ಹಾ ಪ್ರಿಯೆ ಸಾಗರಿಕೆ!

(ಮೂರ್ಛೆಯನ್ನು ನಟಿಸುತ್ತಾನೆ)

29 **ವಿದೂಷಕ**—(ಸಂಭ್ರಮದಿಂದ) ಸಂತೈಸಿಕೋ, ಸಂತೈಸಿಕೋ, ವಯಸ್ಯ!

30 **ರಾಜ** — (ಸಮಾಧಾನ ಹೊಂದಿ, ಕಣ್ಣೀರಿಡುತ್ತಾ) ದಾಕ್ಷಿಣ್ಯ ಶೂನ್ಯನಾದ ನನ್ನನ್ನು ತ್ಯಾಗಮಾಡಿಬಿಡಿ, ಎಲೈ ಪ್ರಾಣಗಳೇ! ನೀವಾದರೂ ದಾಕ್ಷಿಣ್ಯವುಳ್ಳವರಾಗಿ. ನನ್ನ ಮಾತನ್ನು ಕೇಳಿ. ನೀವು ಬೇಗ ಹೋಗದಿದ್ದರೆ, ಖಂಡಿತ ಕಳೆದುಕೊಳ್ಳುವಿರಿ. ಈ ವೇಳೆಗೆ ಆ ಗಜಗಾಮಿನಿ ಬಹಳ ದೂರ ಹೋಗಿಬಿಟ್ಟಿದ್ದಾಳೆ.

31 **ವಿದೂಷಕ**—ಅಯ್ಯಾ, ಬೇರೆ ವಿಧವಾಗಿ ಭಾವಿಸಬೇಡ. ಆ ಬಡಪಾಯಿಯನ್ನು ದೇವಿಯು ಉಜ್ಜಯಿನಿಗೆ ಕಳುಹಿಸಿಬಿಟ್ಟಿದ್ದಾಳೆಂದು ಹೇಳುತ್ತಾರೆ. ಆದ್ದರಿಂದ ನಾನು ಅಪ್ರಿಯವೆಂದು ಹೇಳಿದೆ.

32 **ರಾಜ**—ಹೇಗೆ? ಉಜ್ಜಯಿನಿಗೆ ಕಳುಹಿಸಿದ್ದಾಳೆಯೇ? ದೇವಿಗೆ ನನ್ನಲ್ಲಿ ಎಷ್ಟು ಅನಾದರ! ವಯಸ್ಯ, ಇದನ್ನು ನಿನಗೆ ಹೇಳಿದವರಾರು?

33 **ವಿದೂಷಕ**—ಸುಸಂಗತೆ. ಇಷ್ಟೇ ಅಲ್ಲ. ಆಕೆ ಯಾವುದೋ ಕಾರಣದಿಂದ ಈ ರತ್ನಮಾಲೆಯನ್ನು ನನ್ನ ಕೈಯಲ್ಲಿ ಕಳುಹಿಸಿದ್ದಾಳೆ.

34 **ರಾಜ**—ಬೇರೆ ಏನು (ಕಾರಣದಿಂದ)? ನನ್ನನ್ನು ಸಂತೈಸುವುದಕ್ಕಾಗಿ. ಆದ್ದರಿಂದ, ಇಲ್ಲಿ ಕೊಡು, ಮಿತ್ರ. (ವಿದೂಷಕ ಕೊಡುತ್ತಾನೆ. ತೆಗೆದುಕೊಂಡು, ರತ್ನಮಾಲೆಯನ್ನು ಪರೀಕ್ಷಿಸಿ, ಎದೆಗೆ ಅಪ್ಪಿಕೊಂಡು) ಅಹಹ!

35 ಆಕೆಯ ಕಂಠಾಶ್ಲೇಷವನ್ನು ಹೊಂದಿದ್ದು ಕಳಚಬಂದ ಈ ಮಾಲೆಯಿಂದ, ಸಮಾನಾವಸ್ಥೆಯಲ್ಲಿರುವ ಸಖಿಯಂತೆ, ಈ ನನ್ನ ಶರೀರವು ಆಶ್ವಾಸಿತವಾಗುತ್ತಿದೆ. || ೪ ||

36 ವಯಸ್ಯ, ನೀನು ಇದನ್ನು ಧರಿಸಿಕೋ. ಇದನ್ನಾದರೂ ನೋಡುತ್ತಿದ್ದು ಧೈರ್ಯತಾಳುತ್ತೇನೆ.

37 **ವಿದೂಷಕ**—ಅಯ್ಯಾ, ನೀನು ಆಜ್ಞಾಪಿಸಿದಂತೆ. (ಕುತ್ತಿಗೆಯಲ್ಲಿ ಧರಿಸಿಕೊಳ್ಳುತ್ತಾನೆ)

38 **ರಾಜ**—(ಕಣ್ಣೀರಿಡುತ್ತಾ, ನಿಟ್ಟುಸಿರುಬಿಟ್ಟು) ವಯಸ್ಯ, ಪ್ರಿಯೆಯ ಪುನರ್ದರ್ಶನ ದುರ್ಲಭವೇ?

39 **ವಿದೂಷಕ**--(ಭಯದಿಂದ ಎಲ್ಲ ದಿಕ್ಕುಗಳನ್ನೂ ನೋಡಿ) ಹೀಗೆ ಘಟ್ಟಿಯಾಗಿ ಹೇಳಬೇಡವಯ್ಯಾ. ಒಂದುವೇಳೆ, ಇಲ್ಲಿ ಯಾರಾದರೂ ಸಂಚರಿಸುತ್ತಿರಬಹುದು.

40 (ಬಳಿಕ ಚಿತ್ತವನ್ನು ಕೈಯಲ್ಲಿ ಹಿಡಿದು ವಸುಂಧರೆ ಪ್ರವೇಶಿಸುತ್ತಾಳೆ)

41 **ವಸುಂಧರೆ**—(ಹತ್ತಿರ ಬಂದು) ಮಹಾರಾಜರಿಗೆ ಜಯವಾಗಲಿ! ಮಹಾರಾಜ, ರುಮಣ್ವಂತನ ಸೋದರಳಿಯ ವಿಜಯವರ್ಮನು ಏನೋ ಪ್ರಿಯವಾರ್ತೆಯನ್ನು ಅರಿಕೆಮಾಡಬೇಕೆಂದು ಬಾಗಿಲಲ್ಲಿ ನಿಂತಿದ್ದಾನೆ.

42 **ರಾಜ** —ವಸುಂಧರೆ, ವಿಳಂಬ ಮಾಡದೆ ಒಳಕ್ಕೆ ಕರೆದುಕೊಂಡು ಬಾ.

43 **ವಸುಂಧರೆ**— ಮಹಾರಾಜರ ಅಪ್ಪಣೆಯಂತೆ. (ಹೋಗಿ, ವಿಜಯವರ್ಮನ ಜತೆಯಲ್ಲಿ ಪುನಃ ಪ್ರವೇಶಿಸಿ) ವಿಜಯವರ್ಮನೇ! ಇಗೋ ಮಹಾರಾಜರು. ಹತ್ತಿರ ಹೋಗೋಣಾಗಲಿ.

44 **ವಿಜಯವರ್ಮ** — (ಹತ್ತಿರ ಹೋಗಿ) ಮಹಾರಾಜರಿಗೆ ಜಯವಾಗಲಿ! ರುಮಣ್ವಂತನ ವಿಜಯದಿಂದ ತಾವು ವೃದ್ಧಿಹೊಂದಿರುವುದು ಸಂತೋಷ!

45 **ರಾಜ**— ಭಲೆ, ರುಮಣ್ವಂತನೇ, ಭಲೆ! ಬಲು ಬೇಗ ತುಂಬಾ ಹೆಚ್ಚಾದ ಕಾರ್ಯವನ್ನು ಸಾಧಿಸಿದ್ದೀಯೆ! ವಿಜಯವರ್ಮ, ಇಲ್ಲಿ ಕುಳಿತುಕೋ. (ವಿಜಯವರ್ಮನು ಕುಳಿತುಕೊಳ್ಳುತ್ತಾನೆ) ವಿಜಯವರ್ಮ, ಕೋಸಲೇಶ್ವರನನ್ನು ಜಯಿಸಿಯಾಯಿತೇ?

46 **ವಿಜಯವರ್ಮ**— ಮಹಾಸ್ವಾಮಿಯವರ ಪ್ರಭಾವದಿಂದ.

47 **ರಾಜ**— ವಿಜಯವರ್ಮ, ಹಾಗಾದರೆ ಆ ಕಥೆಯನ್ನು ಹೇಳು; ವಿಸ್ತಾರವಾಗಿ ಕೇಳಬಯಸುತ್ತೇನೆ.

48 **ವಿಜಯವರ್ಮ**—ಕೇಳೋಣವಾಗಲಿ, ಮಹಾಸ್ವಾಮಿ. ಮಹಾಸ್ವಾಮಿಯವರ ಅಪ್ಪಣೆಯ ಮೇರೆಗೆ ಅನೇಕ ಆನೆ, ಕುದುರೆ, ಕಾಲಾಳುಗಳಿಂದ ಕೂಡಿ ತಡೆಯಲಸಾಧ್ಯವಾದ ದೊಡ್ಡ ಸೈನ್ಯಸಮೂಹದೊಡನೆ ಇಲ್ಲಿಂದ ಕೆಲವೇ ದಿವಸಗಳಲ್ಲಿ ಹೋಗಿ ವಿಂಧ್ಯಪರ್ವತದ ಕೋಟೆಯೊಳಗೆ ನೆಲಸಿದ್ದ ಕೋಸಲಪತಿಯ ದ್ವಾರವನ್ನು ಮುತ್ತಿ ಬಿಡಾರಮಾಡಲಾರಂಭಿಸಿದೆವು.

49 **ರಾಜ**— ಆಮೇಲೆ, ಆಮೇಲೆ?

50 **ವಿಜಯವರ್ಮ**—ಆಮೇಲೆ ಕೋಸಲೇಶ್ವರನೂ ಕೂಡ ತುಂಬಾ ದರ್ಪದಿಂದ ಪರಿಭವವನ್ನು ಸಹಿಸದವನಾಗಿ ಆನೆಗಳಿಂದಲೇ ತುಂಬಿಹೋಗಿದ್ದ ತನ್ನ ಸೈನ್ಯವೆಲ್ಲವನ್ನೂ ಸಜ್ಜುಗೊಳಿಸಿದನು.

51 **ವಿದೂಷಕ**— ಸಂಗ್ರಹವಾಗಿ ಹೇಳಯ್ಯಾ; ನನ್ನ ಎದೆ ನಡುಗುತ್ತಿದೆ.

52 **ರಾಜ**— ಆಮೇಲೆ, ಆಮೇಲೆ ?

53 **ವಿಜಯವರ್ಮ**—ಮಹಾಸ್ವಾಮಿ, ಅವನೂ ದೃಢನಿಶ್ಚಯದಿಂದ

54 ಯುದ್ಧಮಾಡಲು ವಿಂಧ್ಯಪರ್ವತದಿಂದ ಹೊರಕ್ಕೆ ಬಂದು, ಆ ಕ್ಷಣವೇ ಮತ್ತೊಂದು ವಿಂಧ್ಯಪರ್ವತದಂತಿದ್ದ ತನ್ನ ಶ್ರೇಷ್ಠವಾದ ಆನೆಗಳ ದಟ್ಟವಾದ ಸಾಲಿನಿಂದ ಎಲ್ಲಾ ದಿಗ್ವಿಭಾಗಗಳನ್ನೂ ಅಡ್ಡಗಟ್ಟಿ, ನಮಗೆ ಅಭಿಮುಖವಾಗಿ ನಿಂತನು. ಕ್ಷಣಮಾತ್ರದಲ್ಲೇ ರುಮಣ್ವಂತನೂ ವೇಗವಾಗಿ ಬಾಣಗಳನ್ನು ಬಿಡುತ್ತಾ, ಮದಿಸಿದ ಆನೆಗಳ ಸಾಲುಗಳಿಂದ ತನ್ನ ಕಾಲಾಳುಸೈನ್ಯವು ತುಳಿಯಲ್ಪಡುತ್ತಿದ್ದರೂ, ಅವನ ಮೇಲೆ ಬಿದ್ದು, ತಾನು ಬಯಸಿದ್ದ (ಅವಕಾಶವ)ನ್ನು ಪಡೆದುದರಿಂದ ಇಮ್ಮಡಿಯಾದ ರಭಸದಿಂದ ಕೂಡಿ, ಎದುರಿಸಿದನು. ||೫||
ಮತ್ತು 55 ಶಿರಸ್ತ್ರಾಣಗಳನ್ನು ಚೆಲ್ಲಾಪಿಲ್ಲಿಯಾಗಿ ಹಾರಿಸಿದ ಶಸ್ತ್ರಗಳ ಸಂಘಟ್ಟನೆಗಳಿಂದ ಕತ್ತರಿಸಿ ಹೋಗಿ ಸ್ವಲ್ಪಕಾಲ ರಕ್ತಪ್ರವಾಹಗಳು ಉಕ್ಕುತ್ತಿರುವ ರುಂಡಗಳು, ಝಣಝಣಿಸುತ್ತಿರುವ ಆಯುಧಗಳು ಮತ್ತು ಬೆಂಕಿಯನ್ನು ಉಗುಳುತ್ತಿರುವ ರಕ್ಷಾಕವಚಗಳು, ಇವುಗಳಿಂದ ಕೂಡಿದ ಯುದ್ಧಭೂಮಿಯಲ್ಲಿ, ಸವಾಲುಹಾಕಿ, ಪ್ರಧಾನ ಸೈನ್ಯವು ಭಗ್ನವಾಗಲು, ——

56 **ರಾಜ** —ಏನು, ನಮ್ಮ ಸೈನ್ಯಗಳೂ ಭಗ್ನವಾದುವೇ ?

57 **ವಿಜಯವರ್ಮ**— ಮದಿಸಿದ ಆನೆಯ ಮೇಲೆ ಕುಳಿತಿದ್ದ ಕೋಸಲಪತಿಯು, ಒಬ್ಬಂಟಿಗನಾದ ರುಮಣ್ವಂತನಿಂದ ನೂರಾರು ಬಾಣಗಳ ಮೂಲಕ ಹತನಾದನು. || ೬ ||

58 **ವಿದೂಷಕ**— ನಿನಗೆ ಜಯವಾಗಲಿ! ನಾವೇ ಗೆದ್ದೆವು!

(ಎಂದು ಕುಣಿಯುತ್ತಾನೆ)

59 **ರಾಜ**—ಭಲೆ! ಕೋಸಲೇಶ್ವರ, ಭಲೆ! ಶತ್ರುಗಳೂ ಕೂಡ ಹೀಗೆ ನಿನ್ನ ಪುರುಷಕಾರವನ್ನು ವರ್ಣಿಸುತ್ತಿರಬೇಕಾದರೆ, ನಿನ್ನ ಮರಣವೂ ಕೂಡ ಶ್ಲಾಘನೀಯವಾದುದೇ ಸರಿ! ಆಮೇಲೆ, ಆಮೇಲೆ ?

60 **ವಿಜಯವರ್ಮ**— ಮಹಾರಾಜ, ಆಮೇಲೆ ರುಮಣ್ವಂತನೂ, ಕೋಸಲ ರಾಜ್ಯದಲ್ಲಿ ನನ್ನ ಅಣ್ಣ ಜಯವರ್ಮನನ್ನು ಇರಿಸಿ, ಏಟುಗಳಿಂದ ಗಾಯಗೊಂಡಿದ್ದ ಆನೆಗಳಿಂದ ಮಾತ್ರ ಕೂಡಿದ್ದ ಎಲ್ಲಾ ಸೈನ್ಯವನ್ನೂ ಕೂಡಿಕೊಂಡು ನಿಧಾನವಾಗಿ ಬರುತ್ತಿದ್ದಾನೆ.

61 **ರಾಜ** — ವಸುಂಧರೆ, ನನ್ನ ಅನುಗ್ರಹದ ವೈಭವವನ್ನು ಈತನಿಗೆ ತೋರು ವಂತೆ ಯೌಗಂಧರಾಯಣನಿಗೆ ಹೇಳು.

62 **ವಸುಂಧರೆ** — ಮಹಾಸ್ವಾಮಿಗಳ ಅಪ್ಪಣೆಯಂತೆ. (ಎಂದು ವಿಜಯವರ್ಮ ನೊಡನೆ ಹೋಗುತ್ತಾಳೆ)

63 (ಬಳಿಕ ಕಾಂಚನಮಾಲೆ ಪ್ರವೇಶಿಸುತ್ತಾಳೆ)

64 **ಕಾಂಚನಮಾಲೆ** — ಮಹಾರಾಣಿಯಿಂದ ಹೀಗೆ ಆಜ್ಞಪ್ತಳಾಗಿದ್ದೇನೆ– 'ಹಂಜೆ ಕಾಂಚನಮಾಲೆ, ಹೋಗು. ಈ ಇಂದ್ರಜಾಲಿಕನನ್ನು ಆರ್ಯಪುತ್ರನಿಗೆ ತೋರಿಸು' ಎಂದು. (ಮುಂದೆ ಹೋಗಿ, ನೋಡಿ) ಮಹಾರಾಜನು ಇಲ್ಲೇ ಇದ್ದಾನೆ. ಆದ್ದರಿಂದ ಈತನ ಹತ್ತಿರ ಹೋಗುತ್ತೇನೆ. (ಹತ್ತಿರ ಹೋಗಿ) ಮಹಾರಾಜರಿಗೆ ಜಯವಾಗಲಿ! ಮಹಾಸ್ವಾಮಿ, ಮಹಾರಾಣಿಯವರು ವಿಜ್ಞಾಪಿಸುತ್ತಾರೆ— 'ಸಂವರಣಸಿದ್ಧಿ ಎಂಬ ಹೆಸರಿನ ಈ ಇಂದ್ರಜಾಲಿಕನು ಉಜ್ಜಯಿನಿಯಿಂದ ಬಂದಿದ್ದಾನೆ. ಆದ್ದರಿಂದ ತಾವು ನೋಡೋಣಾಗಲಿ' ಎಂದು.

65 **ರಾಜ** — ಐಂದ್ರಜಾಲಿಕದಲ್ಲಿ ನಮಗೆ ಆಸಕ್ತಿ ಇದೆ. ಆದ್ದರಿಂದ ಶೀಘ್ರ ವಾಗಿ ಆತನನ್ನು ಕರೆದುಕೊಂಡು ಬಾ.

66 **ಕಾಂಚನಮಾಲೆ** — ಮಹಾಸ್ವಾಮಿಯವರ ಅಪ್ಪಣೆಯಂತೆ. (ಹೊರಕ್ಕೆ ಹೋಗಿ ನವಿಲುಗರಿಕಟ್ಟನ್ನು ಕೈಯಲ್ಲಿ ಹಿಡಿದಿರುವ ಇಂದ್ರಜಾಲಿಕನೊಡನೆ ಪ್ರವೇಶಿಸುತ್ತಾಳೆ) ಮಹಾರಾಜ, ಈತನೇ ಇಂದ್ರಜಾಲಿಕ.

67 **ಇಂದ್ರಜಾಲಿಕ** — (ಹತ್ತಿರ ಹೋಗಿ) ಮಹಾರಾಜನಿಗೆ ಜಯವಾಗಲಿ!
(ನವಿಲುಗರಿಕಟ್ಟನ್ನು ಬೀಸಿ)

68 ಇಂದ್ರಜಾಲಿಕನೆಂದು ಹೆಸರಿಟ್ಟುಕೊಂಡಿರುವ ಇಂದ್ರನ ಕಾಲುಗಳಿಗೆ ಪ್ರಣಾಮ ಮಾಡಿ. ಮಾಯೆಗಳಲ್ಲಿ ಕೀರ್ತಿಗಳಿಸಿರುವ ಶಂಬರನ ಕಾಲುಗಳಿಗೂ ಹಾಗೆಯೇ ನಮಸ್ಕರಿಸಿ. || ೭ ||

69 ಮಹಾರಾಜ, ಕೌಶಾಂಬೀಪತಿ! ಹೆಚ್ಚೇಕೆ?

70 ಚಂದ್ರನನ್ನು ಭೂಮಿಯ ಮೇಲೂ, ಬೆಟ್ಟವನ್ನು ಆಕಾಶದಲ್ಲೂ, ಅಗ್ನಿ ಯನ್ನು ನೀರಿನಲ್ಲೂ, ಮಧ್ಯಾಹ್ನದಲ್ಲಿ ರಾತ್ರಿಯನ್ನೂ ತೋರಿಸಲೇ?– ಅಪ್ಪಣೆಕೊಡು. || ೮ ||

71 **ವಿದೂಷಕ** — ವಯಸ್ಯ, ಗಮನಿಸು. ಇವನ ಜಂಭ ನೋಡಿದರೆ ಎಲ್ಲವೂ ಸಂಭವಿಸಬಹುದು.

72 **ಇಂದ್ರಜಾಲಿಕ**— ಹೆಚ್ಚು ಹೇಳುವುದೇಕೆ? ನಿನ್ನ ಮನಸ್ಸಿನಲ್ಲಿ ಏನೇನನ್ನು ನೋಡಬೇಕೆಂದು ಬಯಸುತ್ತೀಯೋ ಅದೆಲ್ಲವನ್ನೂ ಗುರುವಿನ ಮಂತ್ರಪ್ರಸಾದದಿಂದ ತೋರಿಸುತ್ತೇನೆ. ॥ ೯ ॥

73 **ರಾಜ** — ಅಯ್ಯಾ, ಸ್ವಲ್ಪ ಇರು. ಕಾಂಚನಮಾಲೆ, ದೇವಿಗೆ ಹೇಳು — 'ಈ ಇಂದ್ರಜಾಲಿಕ ನಿನ್ನ ಕಡೆಯುವನೇ. ಈ ಪ್ರದೇಶವೂ ಏಕಾಂತವಾಗಿದೆ. ಆದ್ದರಿಂದ ಬಾ; ಒಟ್ಟಿಗೇ ನೋಡೋಣ' ಎಂದು.

74 **ಕಾಂಚನಮಾಲೆ** — ಮಹಾರಾಜರ ಅಪ್ಪಣೆಯಂತೆ. (ಎಂದು ಹೊರಕ್ಕೆ ಹೋಗಿ, ವಾಸವದತ್ತೆಯೊಡನೆ ಪ್ರವೇಶಿಸುತ್ತಾಳೆ)

75 **ವಾಸವದತ್ತೆ**— ಕಾಂಚನಮಾಲೆ, ಉಜ್ಜಯಿನಿಯಿಂದ ಬಂದವನೆಂದು ಆ ಇಂದ್ರಜಾಲಿಕನಲ್ಲಿ ನನಗೆ ಆತ್ಮೀಯ ಮನೋಭಾವವುಂಟಾಗಿದೆ.

76 **ಕಾಂಚನಮಾಲೆ**— ತೌರೂರಿನ ಮೇಲೆ ಮಹಾರಾಣಿಯವರಿಗಿರುವ ಆದರ ಇದು. ಈಕಡೆ ಬರೋಣವಾಗಲಿ. (ಇಬ್ಬರೂ ಹೋಗುತ್ತಾರೆ)

77 **ವಾಸವದತ್ತೆ** — (ಸಮೀಪಕ್ಕೆ ಹೋಗಿ) ಆರ್ಯಪುತ್ರನಿಗೆ ಜಯವಾಗಲಿ!

78 **ರಾಜ** — ದೇವಿ, ಈತ ತುಂಬ ಗರ್ಜಿಸಿದ್ದಾನೆ. ಆದ್ದರಿಂದ ಇಲ್ಲೇ ಇದ್ದು ನಾವಿಬ್ಬರೂ ನೋಡೋಣ! (ವಾಸವದತ್ತೆ ಕುಳಿತುಕೊಳ್ಳುತ್ತಾಳೆ) ಅಯ್ಯಾ, ಇನ್ನು ಬಹುಬಗೆಯ ಇಂದ್ರಜಾಲವನ್ನು ತೋರಿಸಬಹುದು.

79 **ಇಂದ್ರಜಾಲಿಕ**— ಮಹಾಸ್ವಾಮಿಯ ಅಪ್ಪಣೆಯಂತೆ. (ಬಹುವಿಧವಾಗಿ ನಾಟ್ಯಮಾಡಿ, ನವಿಲುಗರಿಯನ್ನು ತಿರುಗಿಸುತ್ತಾ)

80 ಹರಿ, ಹರ, ಬ್ರಹ್ಮ ಮುಂತಾದ ದೇವತೆಗಳನ್ನೂ ದೇವರಾಜನನ್ನೂ, ಆಕಾಶದಲ್ಲಿ ನರ್ತಿಸುತ್ತಿರುವ ಸಿದ್ಧ ಮತ್ತು ವಿದ್ಯಾಧರ ಸ್ತ್ರೀಯರ ತಂಡವನ್ನೂ ತೋರಿಸುತ್ತೇನೆ. ॥ ೧೦ ॥

81 (ಎಲ್ಲರೂ ವಿಸ್ಮಯದಿಂದ ನೋಡುತ್ತಾರೆ)

82 **ರಾಜ** — (ಮೇಲೆ ನೋಡಿ ಆಸನದಿಂದಿಳಿದು) ಆಶ್ಚರ್ಯ, ಆಶ್ಚರ್ಯ!

83 **ವಿದೂಷಕ** — ಆಶ್ಚರ್ಯ, ಆಶ್ಚರ್ಯ !

84 **ರಾಜ** — ದೇವಿ, ನೋಡು.

85 ಇಗೋ, ಬ್ರಹ್ಮ ಕಮಲದಲ್ಲಿ. ಇಗೋ ಚಂದ್ರಶೇಖರನಾದ ಶಂಕರ. ಇಗೋ ದೈತ್ಯಾಂತಕನಾದ ವಿಷ್ಣು; ಕತ್ತಿ, ಗದೆ, ಚಕ್ರ, ಧನುಸ್ಸುಗಳ ಚಿಹ್ನೆಗಳುಳ್ಳ ನಾಲ್ಕು ತೋಳುಗಳಿಂದ ಕೂಡಿದ್ದಾನೆ. ಇಗೋ ಐರಾವತದ ಮೇಲೆ ಕುಳಿತಿರುವ

ದೇವೇಂದ್ರ! ಹಾಗೆಯೇ ಇಗೋ ಇವರೆಲ್ಲಾ ಉಳಿದ ದೇವತೆಗಳು! ಮತ್ತು ದೇವಿಯೇ, ಇಗೋ ಹೆಜ್ಜೆಯಿಕ್ಕುವುದಕ್ಕೆ ಸರಿಯಾಗಿ ಘಲ್ ಘಲ್ ಶಬ್ದ ಮಾಡುವ ಕಾಲಂದಿಗೆಗಳುಳ್ಳ ದೇವತಾಸ್ತ್ರೀಯರು ಆಕಾಶದಲ್ಲಿ ಕುಣಿಯುತ್ತಾರೆ.

೮೬ **ವಾಸವದತ್ತೆ** —ಆಶ್ಚರ್ಯ, ಆಶ್ಚರ್ಯ!

೮೭ **ವಿದೂಷಕ** — (ಏಕಾಂತವಾಗಿ) ಎಲವೋ ತೊತ್ತಿನಮಗನಾದ ಇಂದ್ರಜಾಲಿಕನೇ! ಈ ದೇವತೆಗಳನ್ನಾಗಲೀ ಅಪ್ಸರಸ್ತ್ರೀಯರನ್ನಾಗಲಿ ತೋರಿಸಿ ಪ್ರಯೋಜನವೇನು? ಈತನನ್ನು ಸಂತೋಷಗೊಳಿಸಬೇಕಾದರೆ, ಸಾಗರಿಕೆಯನ್ನು ತೋರಿಸು.

೮೮ (ಬಳಿಕ ವಸುಂಧರೆ ಪ್ರವೇಶಿಸುತ್ತಾಳೆ)

೮೯ **ವಸುಂಧರೆ** — (ರಾಜನ ಬಳಿ ಹೋಗಿ) ಮಹಾರಾಜರಿಗೆ ಜಯವಾಗಲಿ! ಮಹಾಸ್ವಾಮಿಯವರ ಪಾದಯುಗಳದಲ್ಲಿ ಅಮಾತ್ಯ ಯೌಗಂಧರಾಯಣನು ಅರಿಕೆ ಮಾಡುತ್ತಾನೆ—'ವಿಕ್ರಮಬಾಹುವು ತನ್ನ ಪ್ರಧಾನಾಮಾತ್ಯನಾದ ವಸುಭೂತಿಯನ್ನು ಈಗ ಕಳುಹಿಸಿದ್ದಾನೆ. ಆದ್ದರಿಂದ ಮಹಾಸ್ವಾಮಿಯವರು ಆತನನ್ನು ಈ ಕ್ಷಣವೇ ನೋಡಬೇಕು. ನಾನೂ ಉಳಿದಿರುವ ಕೆಲಸ ಮುಗಿಸಿಕೊಂಡು ಇನ್ನೇನು ಬಂದು ಬಿಟ್ಟೆ.' ಎಂದು.

೯೦ **ವಾಸವದತ್ತೆ** —ಆರ್ಯಪುತ್ರ, ಈ ಇಂದ್ರಜಾಲ ಹಾಗಿರಲಿ. ಪ್ರಧಾನ ಅಮಾತ್ಯ ಆರ್ಯ ವಸುಭೂತಿ ನನ್ನ ಸೋದರಮಾವನ ಮನೆಯಿಂದ ಬಂದಿದ್ದಾನೆ. ಆದ್ದರಿಂದ ಆತನನ್ನು ಆರ್ಯಪುತ್ರನು ಮೊದಲು ನೋಡಲಿ.

೯೧ **ರಾಜ** —ದೇವಿ ಹೇಳಿದಂತೆಯೇ ಆಗಲಿ. (ಇಂದ್ರಜಾಲಿಕನನ್ನು ಕುರಿತು) ಭದ್ರ, ಈಗ ವಿಶ್ರಮಿಸಿಕೋ.

೯೨ **ಇಂದ್ರಜಾಲಿಕ**—(ಪುನಃ ನವಿಲುಗರಿಯನ್ನು ಬೀಸುತ್ತಾನೆ) ಮಹಾಸ್ವಾಮಿಗಳ ಅಪ್ಪಣೆ. (ಹೋಗುತ್ತಾ) ನನ್ನ ಒಂದು ಆಟವನ್ನೇನೋ ಮಹಾಸ್ವಾಮಿಗಳು ನೋಡಲೇಬೇಕು.

೯೩ **ರಾಜ**—ಭದ್ರ, ಆಗಲಿ; ನೋಡುವೆನು.

೯೪ **ವಾಸವದತ್ತೆ**— ಕಾಂಚನಮಾಲೆ, ಹೋಗು. ಈತನಿಗೆ ಪಾರಿತೋಷಿಕವನ್ನು ಕೊಡು.

೯೫ **ಕಾಂಚನಮಾಲೆ**—ಮಹಾರಾಣಿಯವರ ಅಪ್ಪಣೆ.

(ಇಂದ್ರಜಾಲಿಕನೊಡನೆ ಹೋಗುತ್ತಾಳೆ)

96 **ರಾಜ** — ವಸಂತಕ, ವಸುಭೂತಿಯನ್ನು ಇದಿರುಗೊಂಡು ಒಳಕ್ಕೆ ಕರೆದು ಬಾ.

97 **ವಿದೂಷಕ**—ಮಹಾರಾಜರ ಅಪ್ಪಣೆ. (ಹೋಗುತ್ತಾನೆ)

98 (ಬಳಿಕ ವಸಂತಕನಿಂದ ಸ್ವಾಗತಿಸಲ್ಪಡುತ್ತಾ ವಸುಭೂತಿಯೂ ಬಾಭ್ರವ್ಯನೂ ಪ್ರವೇಶಿಸುತ್ತಾರೆ)

99 **ವಸುಭೂತಿ**— (ಸುತ್ತಲೂ ನೋಡಿ) ಅಹೋ, ವತ್ಸೇಶ್ವರನ ಅಂತಸ್ತು ಎಷ್ಟು ಮೇಲ್ತರದ್ದು! ಅಂತೆಯೇ —

100 ಶುಭಲಕ್ಷಣಗಳುಳ್ಳ ಕುದುರೆಗಳನ್ನು ದಿಟ್ಟಿಸಿ ನೋಡುವಾಗ, ಜಯ ಕುಂಜರಗಳಿಂದ ಆಕರ್ಷಿಸಲ್ಪಟ್ಟೆನು. ಸಾಮಂತರಾಜರ ಗೋಷ್ಠಿಗಳಲ್ಲಿ ಕ್ಷಣಕಾಲ ನಿಂತಿದ್ದಾಗ ಸಂಗೀತಧ್ವನಿಯಿಂದ (ಬೇರೆ ಕಡೆ) ಸೆಳೆಯಲ್ಪಟ್ಟೆ. ಈ ಕೈಸಾಲೆಯಲ್ಲೇ ಸಿಂಹಲೇಶ್ವರನ ವೈಭವವೆಲ್ಲಾ ತಟ್ಟನೆ ಮರೆತು ಹೋಗಿಬಿಟ್ಟಿದೆ. ಹೊರಬಾಗಿಲಿನಲ್ಲಿರುವ ವಿಶೇಷವಾದ ಕುತೂಹಲಹುಟ್ಟಿಸುವ ವಸ್ತುಗಳಿಂದ ನಾನು ಹಳ್ಳಿಯವನೇ ಆಗಿಬಿಟ್ಟಿದ್ದೇನೆ. ||೧೨||

101 **ಬಾಭ್ರವ್ಯ**—ವಸುಭೂತಿ, ಬಹಳಕಾಲದಮೇಲೆ ಈ ದಿನ ನನ್ನ ಸ್ವಾಮಿಯನ್ನು ನೋಡುತ್ತೇನೆಂದು, ಸತ್ಯವಾಗಿಯೂ, ಏನೋ ಒಂದು ಬಗೆಯ ಅವಸ್ಥೆಯನ್ನು ಅನುಭವಿಸುತ್ತಿದ್ದೇನೆ. ಯಾಕೆಂದರೆ—

102 ನನ್ನೀ ಸಂತೋಷವು ಈಗ ನನ್ನ ಮುಪ್ಪಿಗೆ ಸಹಾಯ ಮಾಡುತ್ತಲೇ ಇದೆ. ಯಾಕೆಂದರೆ, (ಮುಪ್ಪಿನಿಂದಲೇ) ಹೆಚ್ಚಿರುವ ನಡುಕವನ್ನು ಭಯ ಚಕಿತತೆಯ ಮೂಲಕ ಇನ್ನೂ ಹೆಚ್ಚಿಸುತ್ತಿದೆ. ಮೊದಲೇ ಸ್ಪಷ್ಟವಾಗಿಲ್ಲದ ದೃಷ್ಟಿಯನ್ನು ಕಣ್ಣೀರಿನ ಹನಿಗಳಿಂದ ಪುನಃ ಮರೆಯಿಸುತ್ತಿದೆ. ತೊದಲುವ ಅಕ್ಷರಗಳುಳ್ಳ ಮಾತುಗಳನ್ನು, ಗದ್ಗದತೆಯಿಂದ ಇನ್ನೂ ಅಸ್ಪಷ್ಟವಾಗುವಂತೆ ಮಾಡುತ್ತಿದೆ.

103 **ವಿದೂಷಕ**—(ಮುಂದೆ ಬಂದು) ಅಮಾತ್ಯನು ಬರೋಣವಾಗಲಿ.

104 **ವಸುಭೂತಿ**— (ವಿದೂಷಕನ ಕುತ್ತಿಗೆಯಲ್ಲಿ ರತ್ನಮಾಲಿಕೆಯನ್ನು ನೋಡಿ, ಏಕಾಂತವಾಗಿ) ಬಾಭ್ರವ್ಯ, ರಾಜಪುತ್ರಿಗೆ ಪ್ರಯಾಣ ಹೊರಡುವ ಸಮಯದಲ್ಲಿ ಮಹಾರಾಜನು ಕೊಟ್ಟ ರತ್ನಮಾಲೆಯೇ ಇದು, ಎಂದು ತೋರುತ್ತೆ.

105 **ಬಾಭ್ರವ್ಯ**—ಅಮಾತ್ಯನೇ, ಸಾದೃಶ್ಯವೇನೋ ಇದೆ. ಆದ್ದರಿಂದ ವಸಂತಕನನ್ನು ಕೇಳಲೇನು—'ಇದು ಹೇಗೆ ಬಂತು?' ಎಂದು?

106 **ವಸುಭೂತಿ**—ಬಾಭ್ರವ್ಯ, ಬೇಡ ಬೇಡ. ದೊಡ್ಡರಾಜಕುಲದಲ್ಲಿ ರತ್ನ

ಬಾಹುಳ್ಯವಿರುವುದರಿಂದ ಒಡವೆಗಳ ಹೋಲಿಕೆ ದುರ್ಲಭವಾದುದಲ್ಲ.

107 **ವಿದೂಷಕ**—ಇಗೋ ಮಹಾರಾಜರು. ಆದ್ದರಿಂದ ಅಮಾತ್ಯರು ಹತ್ತಿರ ಹೋಗೋಣವಾಗಲಿ.

108 **ವಸುಭೂತಿ**—(ಹತ್ತಿರ ಹೋಗಿ) ಮಹಾರಾಜರಿಗೆ ಜಯವಾಗಲಿ!

109 **ರಾಜ**—(ಎದ್ದು) ಅಭಿವಾದನ ಮಾಡುತ್ತೇನೆ.

110 **ವಸುಭೂತಿ**—ತುಂಬಾ ಶ್ರೇಯಸ್ಸುಳ್ಳವನಾಗು.

111 **ರಾಜ**—ಆರ್ಯನಿಗೆ ಆಸನವೆಲ್ಲಿ?

112 **ವಿದೂಷಕ**—ಇಗೋ ಆಸನ. ಅಮಾತ್ಯರು ಕುಳಿತುಕೊಳ್ಳೋಣಾಗಲಿ.

(ವಸುಭೂತಿ ಕುಳಿತುಕೊಳ್ಳುತ್ತಾನೆ)

113 **ಬಾಭ್ರವ್ಯ**--ಮಹಾರಾಜ, ಬಾಭ್ರವ್ಯನು ನಮಸ್ಕರಿಸುತ್ತಾನೆ.

114 **ರಾಜ**—(ಬೆನ್ನಿನ ಮೇಲೆ ಕೈಯಾಡಿಸಿ) ಬಾಭ್ರವ್ಯ, ಇತ್ತ ಕುಳಿತುಕೋ.

115 **ವಿದೂಷಕ**— ಅಮಾತ್ಯ; ಇಗೋ ದೇವೀ ವಾಸವದತ್ತೆಯು ನಮಸ್ಕರಿಸುತ್ತಾಳೆ.

116 **ವಾಸವದತ್ತೆ**—ಆರ್ಯ, ನಮಸ್ಕರಿಸುತ್ತೇನೆ.

117 **ವಸುಭೂತಿ**—ಆಯುಷ್ಮತಿ, ವತ್ಸರಾಜನಿಗೆ ಸಮನಾದ ಮಗನನ್ನು ಪಡೆ.

118 **ರಾಜ**—ಆರ್ಯ ವಸುಭೂತಿ, ಪೂಜ್ಯನಾದ ಸಿಂಹಲೇಶ್ವರನಿಗೆ ಕುಶಲವೇ?

119 **ವಸುಭೂತಿ**—(ಮೇಲೆ ನೋಡಿ, ನಿಟ್ಟುಸಿರು ಬಿಟ್ಟು) ಮಹಾರಾಜ, ಮಂದಭಾಗ್ಯನಾದ ನಾನು ಏನು ವಿಜ್ಞಾಪಿಸಬೇಕೆಂಬುದನ್ನರಿಯೆ. (ಮುಖ ತಗ್ಗಿಸಿಕೊಂಡು ನಿಲ್ಲುತ್ತಾನೆ)

120 **ವಾಸವದತ್ತೆ**—(ವಿಷಾದದಿಂದ, ಆತ್ಮಗತ) ಹಾ ಧಿಕ್! ಹಾ ಧಿಕ್! ವಸುಭೂತಿ ಈಗ ಏನು ಹೇಳುವನೋ?

121 **ರಾಜ**– ವಸುಭೂತಿ, ಹೇಳು; ನನ್ನನ್ನೇಕೆ ಹೀಗೆ ವ್ಯಾಕುಲಗೊಳಿಸುತ್ತೀ?

122 **ಬಾಭ್ರವ್ಯ**—(ಏಕಾಂತವಾಗಿ) ಎಷ್ಟುಹೊತ್ತು ತಡೆದರೂ ಯಾವುದನ್ನು ಹೇಳಲೇಬೇಕೋ, ಅದನ್ನು ಈಗಲೇ ಹೇಳಿಬಿಡು.

123 **ವಸುಭೂತಿ**—(ಕಣ್ಣೀರಿಡುತ್ತಾ) ದೇವ, ಇದನ್ನರಿಕೆಮಾಡಲು ಸಾಧ್ಯವಿಲ್ಲ. ಆದರೂ ಮಂದಭಾಗ್ಯನಾದ ನಾನು ಹೇಳುತ್ತೇನೆ. ಆಯುಷ್ಮತಿಯಾದ ವಾಸವದತ್ತೆ ಸುಟ್ಟುಹೋದಳೆಂದು ಕೇಳಿದಮೇಲೆ ಪೂಜ್ಯನಾದ ಸಿಂಹಳೇಶ್ವರನು, ನಾವು ಹಿಂದೆಯೇ ಪ್ರಾರ್ಥಿಸಿದ್ದಂತೆ ತನ್ನ ಮಗಳಾದ ಯಾವ ರತ್ನಾವಳಿಯನ್ನು ಮಹಾರಾಜರಿಗೆ ಕೊಟ್ಟನೋ—

124 **ರಾಜ** — (ಏಕಾಂತವಾಗಿ) ದೇವಿ, ಇದೇನು ನಿನ್ನ ಸೋದರಮಾವನ ಅಮಾತ್ಯನು ಈಗ ಸುಳ್ಳು ಹೇಳುತ್ತಿದ್ದಾನಲ್ಲಾ ?

125 **ವಾಸವದತ್ತೆ**—(ನಕ್ಕು) ಆರ್ಯಪುತ್ರ, ಇಲ್ಲಿ ಯಾರು ಸುಳ್ಳುಹೇಳುತ್ತಿದ್ದಾರೆ ಎಂಬುದು ನನಗೂ ತಿಳಿಯದು.

126 **ವಿದೂಷಕ** —ಅವಳಿಗೇನಾಯಿತು ?

127 **ವಸುಭೂತಿ**— ತಮ್ಮಲ್ಲಿಗೆ ಅವಳನ್ನು ಕರೆತರುತ್ತಿರುವಾಗ, ಹಡಗು ಒಡೆದು ಹೋಗಿ, ಅವಳು ಸಮುದ್ರದಲ್ಲಿ ಮುಳುಗಿ ಹೋದಳು.

128 (ಅಳುತ್ತಾ ಮುಖತಗ್ಗಿಸಿ ನಿಂತುಕೊಳ್ಳುತ್ತಾನೆ)

129 **ವಾಸವದತ್ತೆ** —(ಕಣ್ಣೀರಿಡುತ್ತಾ) ಹಾ ಮಂದಭಾಗ್ಯಳಾದ ನಾನು ಕೆಟ್ಟೆ ! ಹಾ ಪ್ರಿಯತಂಗಿ ರತ್ನಾವಳಿ! ಈಗ ಎಲ್ಲಿದ್ದೀಯೆ ? ನನಗೆ ಉತ್ತರ ಕೊಡು.

(ಮೂರ್ಛಿತಳಾಗಿ ಬೀಳುತ್ತಾಳೆ)

130 **ರಾಜ** – ಸಂತೈಸಿಕೋ, ಸಂತೈಸಿಕೋ! ದೈವಗತಿಯನ್ನರಿಯುವುದಸಾಧ್ಯ! ಹಡಗು ಒಡೆದುದರಿಂದ ಮುಳುಗಿದರೂ ಪುನಃ ಮೇಲೆದ್ದು ಬಂದಿರುವ ಈ ಇಬ್ಬರೇ ಇದಕ್ಕೆ ನಿದರ್ಶನವಲ್ಲವೇ ? (ವಸುಭೂತಿಯನ್ನೂ ಬಾಭ್ರವ್ಯನನ್ನೂ ತೋರಿಸುತ್ತಾನೆ)

131 **ವಾಸವದತ್ತೆ** —ಆರ್ಯಪುತ್ರ, ಇದು ಸರಿ. ಆದರೆ ನನಗೆ ಇಷ್ಟು ಅದೃಷ್ಟ ಎಲ್ಲಿಂದ ಬರಬೇಕು ?

132 **ರಾಜ**— (ಏಕಾಂತವಾಗಿ) ಬಾಭ್ರವ್ಯ, ಇದೇನೆಂಬುದು ನನಗೆ ಸ್ವಲ್ಪವೂ ತಿಳಿಯುತ್ತಿಲ್ಲ.

133 **ಬಾಭ್ರವ್ಯ** — ಮಹಾರಾಜ, ಕೇಳೋಣಾಗಲಿ.......

134 (ತೆರೆಯ ಹಿಂದೆ ತುಂಬಾ ಕೋಲಾಹಲ)

135 ಜ್ವಾಲೆಗಳ ಸಮೂಹಗಳಿಂದ ಸೌಧಗಳಿಗೆ ಚಿನ್ನದ ಶಿಖರಗಳ ಕಾಂತಿಯನ್ನುಂಟುಮಾಡುತ್ತಾ, ದಟ್ಟವಾದ ಉದ್ಯಾನವೃಕ್ಷಗಳ ತುದಿಯೆಲ್ಲಾ ಕಂದಿರುವುದರಿಂದಲೇ ಸೂಚಿತವಾದ ಅತ್ಯಂತ ತೀವ್ರವಾದ ಉರಿಯಿಂದ ಕೂಡಿ, ಹೊಗೆ (ಯ ಮೋಡ) ಗಳಿಂದ ಕ್ರೀಡಾಶೈಲವನ್ನು ನೀರಿನಿಂದ ತುಂಬಿದ ಮೋಡಗಳಂತೆ ಕಪ್ಪುಬಣ್ಣವುಳ್ಳಂತೆ ಮಾಡುತ್ತಾ ಈ ಅಗ್ನಿಯು, ಉರಿಯ ತಾಪಕ್ಕೆ ಆರ್ತನಾದ ಮಾಡುತ್ತಿರುವ ಹೆಂಗಸರಿಂದಕೂಡಿದ ಅಂತಃಪುರದಲ್ಲಿ, ಇದ್ದಕ್ಕಿದ್ದಂತೆಯೇ ಎದ್ದು ಬಿಟ್ಟಿದೆ! || ೧೪ ||

136 (ಎಲ್ಲರೂ ಸಂಭ್ರಾಂತರಾಗಿ ನೋಡುತ್ತಾರೆ)

137 **ರಾಜ** — ಏನು, ಅಂತಃಪುರದಲ್ಲಿ ಅಗ್ನಿಯೇ? (ಸಂಭ್ರಮದಿಂದ ಎದ್ದು) ಕಷ್ಟ! ದೇವೀವಾಸವದತ್ತೆ ಸುಟ್ಟುಹೋದಳು!

138 ದೇವಿಯು ಲಾವಾಣಕದಲ್ಲಿ ಸುಟ್ಟುಹೋದಳೆಂಬ ಹಿಂದೆ ಹುಟ್ಟಿದ್ದ ಪ್ರವಾದವನ್ನು ಈಗ ಸತ್ಯವನ್ನಾಗಿಮಾಡಲೋ ಎಂಬಂತೆ ಅಗ್ನಿಯು ಈಗ ಇಲ್ಲಿ ಎದ್ದಿದೆ.

139 **ವಾಸವದತ್ತೆ** — ಆರ್ಯಪುತ್ರ, ರಕ್ಷಿಸು, ರಕ್ಷಿಸು!

140 **ರಾಜ** — ಇದೇನಿದು, ದೇವಿಯು ಪಕ್ಕದಲ್ಲೇ ಇದ್ದರೂ ಅತಿಸಂಭ್ರಮದಿಂದ ಗಮನಕ್ಕೇ ಬರಲಿಲ್ಲ? (ದೇವಿಯ ಕೈಯನ್ನು ಹಿಡಿದುಕೊಂಡು, ಆಲಿಂಗಿಸಿಕೊಳ್ಳುತ್ತಾ) ದೇವಿ, ಸಂತೈಸಿಕೋ, ಸಂತೈಸಿಕೋ!

141 **ವಾಸವದತ್ತೆ** — ಆರ್ಯಪುತ್ರ, ನನಗಾಗಿ ನಾನು ಆ ಮಾತು ಹೇಳಲಿಲ್ಲ! ಆದರೆ ನಿರ್ಘೃಣಳಾದ ನನ್ನಿಂದ ಸಂಕಲಿಗಳಮೂಲಕ ಬಂಧಿತಳಾಗಿರುವ ಸಾಗರಿಕೆ ಇಲ್ಲಿ ವಿಪತ್ತಿಗೀಡಾಗಿದ್ದಾಳೆ. ಆದ್ದರಿಂದ ಆರ್ಯಪುತ್ರನು ಅವಳನ್ನು ರಕ್ಷಿಸಬೇಕು.

142 **ರಾಜ** — ದೇವಿಯೇ, ಏನು ಸಾಗರಿಕೆ ವಿಪತ್ತಿಗೀಡಾಗಿದ್ದಾಳೆಯೇ? ಇಗೋ ಹೋಗುತ್ತೇನೆ.

143 **ವಸುಭೂತಿ** — ಮಹಾಸ್ವಾಮಿ, ಇದೇನು ಕಾರಣವಿಲ್ಲದೆಯೇ ಪತಂಗವೃತ್ತಿಯನ್ನವಲಂಬಿಸುತ್ತಿದ್ದೀರಿ?

144 **ಬಾಭ್ರವ್ಯ** — ಸ್ವಾಮಿ, ವಸುಭೂತಿ ಯುಕ್ತವಾದ್ದನ್ನೇ ಹೇಳುತ್ತಿದ್ದಾನೆ.

145 **ವಿದೂಷಕ** — (ರಾಜನನ್ನು ಉತ್ತರೀಯದಲ್ಲಿ ಹಿಡಿದುಕೊಂಡು) ಅಯ್ಯಾ, ದುಡುಕಬೇಡ.

146 **ರಾಜ** — (ಉತ್ತರೀಯವನ್ನು ತೆಗೆದುಹಾಕಿ) ಛಿ ಮೂರ್ಖ! ಸಾಗರಿಕೆ ವಿಪತ್ತಿಗೊಳಗಾಗಿದ್ದಾಳೆ. ಈಗಲೂ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕೇ? (ಬೆಂಕಿಯೊಳಕ್ಕೆ ಪ್ರವೇಶವನ್ನು ನಟಿಸಿ ಹೊಗೆಯು ಆವರಿಸಿಕೊಳ್ಳುತ್ತಿರುವುದನ್ನು ತೋರಿಸುತ್ತಾನೆ.)

147 ಅಗ್ನಿಯೇ, ಸುಮ್ಮನಾಗು, ಸುಮ್ಮನಾಗು. ಹೊಗೆ ಹರಡುವುದನ್ನು ಬಿಟ್ಟು ಬಿಡು. (ನಿನ್ನ) ಜ್ವಾಲೆಗಳ ಚಕ್ರವಾಲವನ್ನೇಕೆ ಅಷ್ಟು ಎತ್ತರವಾಗಿ ಪ್ರಕಟಿಸುತ್ತಿದ್ದೀ? ಪ್ರಳಯಾಗ್ನಿಯಂತಹ ಪ್ರಿಯೆಯ ವಿರಹಾಗ್ನಿಯಿಂದಲೇ ದಗ್ಧನಾಗದ ನನಗೆ ನೀನೇನು ಮಾಡಬಲ್ಲೆ? ॥ ೧೬ ॥

148 **ವಾಸವದತ್ತೆ** — ದುಃಖಕಾರಿಣಿಯಾದ ನನ್ನ ಮಾತಿನಮೇಲೆಯೇ ಆರ್ಯಪುತ್ರನು ಈ ಕಾರ್ಯಕ್ಕೆ ತೊಡಗಿಬಿಟ್ಟಿದ್ದಾನಲ್ಲಾ! ಆದ್ದರಿಂದ ನಾನೂ ಅವನನ್ನೇ ಹಿಂಬಾಲಿಸುತ್ತೇನೆ.

149 **ವಿದೂಷಕ**—(ಮುಂದೆ ಬಂದು) ಪೂಜ್ಯಳೇ, ನಾನೂ ನಿನಗೆ ಮಾರ್ಗದರ್ಶಕನಾಗುತ್ತೇನೆ.

150 **ವಸುಭೂತಿ**—ಇದೇನು, ವತ್ಸರಾಜನು ಅಗ್ನಿಯೊಳಕ್ಕೆ ಪ್ರವೇಶಿಸಿಯೇ ಬಿಟ್ಟನಲ್ಲಾ! ಆದ್ದರಿಂದ ರಾಜಪುತ್ರಿಯ ವಿಪತ್ತನ್ನು ಈಗಾಗಲೇ ಕಣ್ಣಾರಕಂಡಿರುವ ನಾನೂ ಇಲ್ಲೇ ನನ್ನ ಆತ್ಮವನ್ನು ಆಹುತಿಯಾಗಿ (ಹೋಮ) ಮಾಡಿಬಿಡುವುದೇ ಯುಕ್ತ.

151 **ಬಾಭ್ರವ್ಯ**—(ಕಣ್ಣೀರಿಡುತ್ತಾ) ಹಾ ಮಹಾರಾಜ! ಇದೇನು ಕಾರಣವಿಲ್ಲದೆಯೇ ಭರತನ ವಂಶವು ಸಂಶಯದ ತಕ್ಕಡಿಯಲ್ಲಿಡಲ್ಪಟ್ಟಿತಲ್ಲಾ! ಅಥವಾ ಪ್ರಲಾಪ ಏತಕ್ಕೆ? ನಾನೂ ನನ್ನ ಭಕ್ತಿಗೆ ಸದೃಶವಾದ ಕೆಲಸ ಆಚರಿಸುತ್ತೇನೆ.

152 (ಎಲ್ಲರೂ ಅಗ್ನಿ ಪ್ರವೇಶ ನಟಿಸುತ್ತಾರೆ)

153 **ರಾಜ**—(ಬಲಭುಜ ಅದಿರುವುದನ್ನು ಸೂಚಿಸಿ) ಈ ಅವಸ್ಥೆಯಲ್ಲಿರುವ ನನಗೆ ಇದರ ಫಲವೆಲ್ಲಿಂದ? (ಮುಂದೆ ನೋಡಿ, ಹರ್ಷದಿಂದ ಕೂಡಿದ ತವಕದಿಂದ) ಇದೇನು, ಅಗ್ನಿ ಸನ್ನಿಹಿತವಾಗಿರುವ ಕಡೆಯೇ ಸಾಗರಿಕೆ ಇದ್ದಾಳಲ್ಲಾ! ಆದ್ದರಿಂದ ಬೇಗ ಅವಳನ್ನು ರಕ್ಷಿಸುತ್ತೇನೆ.

154 (ಬಳಿಕ ಸಂಕಲೆಗಳಿಂದ ಬಂಧಿತಳಾದ ಸಾಗರಿಕೆ ಪ್ರವೇಶಿಸುತ್ತಾಳೆ)

155 **ಸಾಗರಿಕೆ**—(ಸುತ್ತಲೂ ನೋಡಿ) ಅದೃಷ್ಟವಶಾತ್ ಸುತ್ತಲೂ ಪ್ರಜ್ವಲಿಸುತ್ತಿರುವ ಅಗ್ನಿಯು ಈಗ ನನ್ನ ದುಃಖವನ್ನು ಕೊನೆಗಾಣಿಸುವುದು.

156 **ರಾಜ**—(ಬೇಗ ಹತ್ತಿರಕ್ಕೆ ಬಂದು) ಪ್ರಿಯೆ, ಈಗಲೂ ಏತಕ್ಕೆ ಹಿಂದು ಮುಂದು ನೋಡುತ್ತಿದ್ದೀಯೆ ?

157 **ಸಾಗರಿಕೆ**—(ರಾಜನನ್ನು ಕಂಡು, ಆತ್ಮಗತ) ಇದೇನು ಆರ್ಯಪುತ್ರ! ಈತನನ್ನು ಕಂಡು ನನಗೆ ಪುನಃ ಬದುಕಬೇಕೆಂಬ ಆಸೆ ಉಂಟಾಗಿದೆ. (ಪ್ರಕಾಶ) ಸ್ವಾಮಿಯೇ, ರಕ್ಷಿಸು!

158 **ರಾಜ**—ಭೀರುವೇ, ಭಯ ಸಾಕು.

159 ಕ್ಷಣಕಾಲ ಈ ದಟ್ಟವಾದ ಹೊಗೆಯ ಪ್ರವಾಹವನ್ನು ಸಹಿಸಿಕೊ.

160 (ಮುಂದೆ ನೋಡಿ) ಹಾಹಾ, ಎದೆಯ ಮೇಲಿಂದ ಜಾರಿದ ಈ ರೇಷ್ಮೆಯ ವಸ್ತ್ರವು ಹತ್ತಿಕೊಂಡಿತು!

161 (ನೋಡಿ) ಪ್ರಿಯೆ ಪುನಃ ಎಡವುತ್ತೀ, ಏಕೆ? (ಗಮನಿಸಿ) ಸಂಕಲೆಗಳಿಂದ ಬಂಧಿತಳಾಗಿದ್ದೀಯಾ?

162 (ಸೊಂಟಕಟ್ಟಿ) ಬೇಗ ನಿನ್ನನ್ನು ಇಲ್ಲಿಂದ ಎತ್ತಿಕೊಂಡುಹೋಗಿಬಿಡುತ್ತೇನೆ. ನನ್ನನ್ನು ತಬ್ಬಿ ಹಿಡಿದುಕೋ. ||೧೭||

163 (ಕುತ್ತಿಗೆಗೆ ಅಪ್ಪಿ, ಕಣ್ಣುಮುಚ್ಚಿಕೊಂಡು ಸ್ಪರ್ಶಸುಖವನ್ನು ನಟಿಸುತ್ತಾ) ಆಶ್ಚರ್ಯ, ಈ ನನ್ನ ಸಂತಾಪ ಕ್ಷಣಮಾತ್ರದಲ್ಲಿ ಹೋಗಿಬಿಟ್ಟಿತು! ಪ್ರಿಯೆ, ಸಂತೈಸಿಕೋ!

164 ನಿನಗೆ ಹತ್ತಿಕೊಂಡರೂ ಬೆಂಕಿಯು ನಿನ್ನನ್ನು ಸುಡುವುದಿಲ್ಲವೆಂಬುದು ವ್ಯಕ್ತವಾಗಿಯೇ ಇದೆ; ಯಾಕೆಂದರೆ, ಎಲೈ ಪ್ರಿಯಳೇ, ಈ ನಿನ್ನ ಸ್ಪರ್ಶವು (ನನ್ನ) ಸಂತಾಪವನ್ನೇ ಹೋಗಲಾಡಿಸಿ ಬಿಟ್ಟಿದೆ. ||೧೮||

165 (ಕಣ್ಣುಗಳನ್ನು ತೆರೆದು, ನೋಡಿ) ಅಹೋ, ಎಂತಹ ಆಶ್ಚರ್ಯ!

ಬೆಂಕಿಯು ಎಲ್ಲಿ ಹೋಯಿತು? ಈ ಅಂತಃಪುರವೂ ಇದ್ದಂತೆಯೇ ಇದೆ! (ವಾಸವದತ್ತೆಯನ್ನು ಕಂಡು) ಇದೇನು, ಈಕೆ ಅವಂತಿರಾಜಪುತ್ರಿ!

166 **ವಾಸವದತ್ತೆ**- (ರಾಜನ ಕೈಯನ್ನು ಸವರುತ್ತಾ, ಹರ್ಷದಿಂದ) ಅದೃಷ್ಟ ವಶಾತ್ ಆರ್ಯಪುತ್ರನ ಶರೀರದಲ್ಲಿ ಗಾಯವೇನೂ ಆಗಿಲ್ಲ!

167 **ರಾಜ**—ಈತ ಬಾಭ್ರವ್ಯ! ........

168 **ಬಾಭ್ರವ್ಯ**— ಮಹಾರಾಜ, ಪುನಃ ಉಸಿರಾಡುವಂತಾದೆವು!

169 **ರಾಜ**— ....ಈತ ವಸುಭೂತಿ!

170 **ವಸುಭೂತಿ**—ಮಹಾರಾಜರಿಗೆ ಜಯವಾಗಲಿ!

171 **ರಾಜ**— .... .... (ನನ್ನ) ವಯಸ್ಯ (ಈತ)!

172 **ವಿದೂಷಕ**— ನಿನಗೆ ಜಯವಾಗಲಿ!

173 **ರಾಜ**— (ಆಲೋಚಿಸಿ, ತರ್ಕಿಸುತ್ತಾ) ಇದೇನು ಸ್ವಪ್ನದಲ್ಲಿ ನನ್ನ ಬುದ್ಧಿ ಭ್ರಮಿಸುತ್ತಿದೆಯೋ, ಅಥವಾ ಇದು ಇಂದ್ರಜಾಲವೋ? ||೧೯||

174 **ವಿದೂಷಕ**— ಅಯ್ಯಾ, ಸಂದೇಹ ಪಡಬೇಡ. ಇದು ಇಂದ್ರಜಾಲವೇ ಸರಿ. ಆ ಶೊತ್ತಿನ ಮಗ ಇಂದ್ರಜಾಲಿಕ ಹೇಳಲಿಲ್ಲವೇ—'ಅವಶ್ಯವಾಗಿಯೂ ನನ್ನ ಒಂದು ಆಟವನ್ನು ಮಹಾರಾಜರು ನೋಡಲೇ ಬೇಕು' ಎಂದು? ಅದೇ ಇದು.

175 **ರಾಜ**— ದೇವಿ, ನಿನ್ನ ಮಾತಿನ ಮೇಲೆಯೇ ಈ ಸಾಗರಿಕೆಯನ್ನು ನಾನು ಇಲ್ಲಿಗೆ ಕರೆತಂದದ್ದು.

176 **ವಾಸವದತ್ತೆ**—(ನಕ್ಕು) ಆರ್ಯಪುತ್ರ, ಎಲ್ಲಾ ತಿಳಿದದ್ದೇ.

177 **ವಸುಭೂತಿ**—(ಸಾಗರಿಕೆಯನ್ನು ಕಂಡು, ಏಕಾಂತವಾಗಿ) ಬಾಭ್ರವ್ಯ, ಈಕೆ (ನಮ್ಮ) ರಾಜಪುತ್ರಿಯ ಹಾಗೆಯೇ ಇದ್ದಾಳೆ.

178 **ಬಾಭ್ರವ್ಯ** — ಅಮಾತ್ಯ, ನನ್ನ ಮನಸ್ಸಿನಲ್ಲೂ ಅದೇ (ಭಾವನೆ) ಇದೆ.

179 **ವಸುಭೂತಿ**—(ಪ್ರಕಾಶ; ರಾಜನನ್ನು ಕುರಿತು) ಮಹಾರಾಜ, ಈ ಕನ್ಯೆ ಎಲ್ಲಿಯವಳು?

180 **ರಾಜ**— ದೇವಿಗೆ ಗೊತ್ತು.

181 **ವಸುಭೂತಿ**—ಮಹಾರಾಣಿ, ಈ ಕನ್ಯೆ ಎಲ್ಲಿಯವಳು?

182 **ವಾಸವದತ್ತೆ**— ಅಮಾತ್ಯ, ಸಾಗರದಲ್ಲಿ ದೊರೆತಳೆಂದು ಹೇಳಿ ಈಕೆಯನ್ನು ಅಮಾತ್ಯ ಯೌಗಂಧರಾಯಣನು ನನ್ನ ಕೈಯಲ್ಲಿ ನಿಕ್ಷೇಪವಾಗಿ ಇಟ್ಟನು. ಆದ್ದರಿಂದಲೇ ಈಕೆಯನ್ನು **ಸಾಗರಿಕೆ** ಯೆಂದು ಕರೆಯಲಾಗುತ್ತಿದೆ.

183 **ರಾಜ** — (ಸ್ವಗತ) ಏನು, ಯೌಗಂಧರಾಯಣ ನ್ಯಾಸವಾಗಿಟ್ಟನೇ? ನನಗೆ ತಿಳಿಸದೆಯೇ ಅವನು ಯಾವುದಾದರೂ ಕೆಲಸಗಳನ್ನು ಮಾಡುತ್ತಾನೆಯೇ?

184 **ವಸುಭೂತಿ**—(ಏಕಾಂತವಾಗಿ) ಬಾಭ್ರವ್ಯ, ವಸಂತಕನ ಕುತ್ತಿಗೆಯಲ್ಲಿರುವ ರತ್ನಮಾಲೆಯ ಸಾದೃಶ್ಯ, ಈಕೆಯೂ ಸಾಗರದಲ್ಲಿ ದೊರೆತದ್ದು,—ಇಷ್ಟರಿಂದಲೇ ಈಕೆ ಸಿಂಹಲೇಶ್ವರನ ಮಗಳಾದ ರತ್ನಾವಳಿಯೆಂಬುದು ವ್ಯಕ್ತವಾಗುತ್ತೆ. (ಹತ್ತಿರ ಹೋಗಿ, ಪ್ರಕಾಶ) ಆಯುಷ್ಮಂತಳಾದ ರಾಜಪುತ್ರಿ ರತ್ನಾವಳಿ! ನೀನು ಈ ಅವಸ್ಥೆಗೀಡಾದೆಯಾ!

185 **ಸಾಗರಿಕೆ**— (ವಸುಭೂತಿಯನ್ನು ನೋಡಿ, ಕಣ್ಣೀರಿಡುತ್ತಾ) ಇದೇನು? ಅಮಾತ್ಯ ವಸುಭೂತಿ!

186 **ವಸುಭೂತಿ** — ಹಾ, ಮಂದಭಾಗ್ಯನಾದ ನಾನು ಕೆಟ್ಟೆ! (ಎಂದು ಭೂಮಿಯ ಮೇಲೆ ಬೀಳುತ್ತಾನೆ)

187 **ಸಾಗರಿಕೆ** — ಹಾ ಅಪ್ಪ! ಹಾ ಅಮ್ಮ! ಎಲ್ಲಿದ್ದೀ? ನನಗೆ ಬದಲು ಕೊಡು. (ಮೂರ್ಛೆ ಹೋಗುತ್ತಾಳೆ)

188 **ವಾಸವದತ್ತೆ**—(ಸಂಭ್ರಮದಿಂದ) ಕಂಚುಕಿ, ನನ್ನಾ ತಂಗಿ ರತ್ನಾವಳಿ ಈಕೆಯೇ ಏನು?

189 **ಬಾಭ್ರವ್ಯ**—ಈಕೆಯೇ ಅವಳು, ಮಹಾರಾಣಿ.

190 **ವಾಸವದತ್ತೆ**— (ರತ್ನಾವಳಿಯನ್ನಾಲಿಂಗಿಸಿಕೊಂಡು) ತಂಗಿ, ಸಂತೈಸಿಕೋ, ಸಂತೈಸಿಕೋ!

191 **ರಾಜ**—ಉದಾತ್ತವಂಶದಲ್ಲಿ ಜನಿಸಿರುವ ಸಿಂಹಳೇಶ್ವರ ವಿಕ್ರಮಬಾಹುವಿನ ಮಗಳು ಈಕೆಯೋ ಏನು ?

192 **ವಿದೂಷಕ**—(ಸ್ವಗತ) ರತ್ನಾವಳಿಯನ್ನು ನೋಡಿ ಮೊದಲೇ ನನಗೆ ತಿಳಿದಿತ್ತು: –ಸಾಮಾನ್ಯ ಜನರಿಗೆ ಈ ಬಗೆಯ ಅಲಂಕಾರವಿರುವುದಿಲ್ಲ, ಎಂದು.

193 **ವಸುಭೂತಿ**—(ಎಷ್ಟು) ರಾಜಪುತ್ರಿ, ಸಂತೈಸಿಕೋ, ಸಂತೈಸಿಕೊ.

194 **ರತ್ನಾವಳೀ**—(ಸಂತೈಸಿಕೊಂಡು, ರಾಜನನ್ನು ಓರೆಗಣ್ಣಿನಿಂದ ನೋಡುತ್ತಾ, ಸ್ವಗತ) ಅಪರಾಧಿನಿಯಾದ ನಾನು ಮಹಾರಾಣಿಗೆ ಮುಖ ತೋರಿಸಲಾರೆ, (ಎಂದು ಮುಖ ತಗ್ಗಿಸಿಕೊಳ್ಳುತ್ತಾಳೆ)

195 **ವಾಸವದತ್ತೆ** - (ಕಂಬನಿತುಂಬಿ, ಎರಡು ಕೈಗಳನ್ನೂ ಚಾಚಿ) ಬಾ ಅತಿನಿಷ್ಠುರಳೇ, (ಆದರೆ) ಈಗ ಪ್ರೀತಿಯ ತಂಗಿಯೇ! ನಿನ್ನ ಸ್ನೇಹವನ್ನು ತೋರಿಸು. (ಕುತ್ತಿಗೆಗೆ ಅಪ್ಪಿಕೊಳ್ಳುತ್ತಾಳೆ. ರತ್ನಾವಳಿಯು ಎಡವುವುದನ್ನು ನಟಿಸುತ್ತಾಳೆ. ಏಕಾಂತವಾಗಿ) ಆರ್ಯಪುತ್ರ, ಈ ನನ್ನ ನೃಶಂಸವಾದ ಕಾರ್ಯದಿಂದ ಲಜ್ಜಿತಳಾಗಿದ್ದೇನೆ. ಆದ್ದರಿಂದ ಬೇಗ ಈಕೆಯ ಬಂಧನವನ್ನು ತೆಗೆದುಬಿಡು.

196 **ರಾಜ**—(ಸಂತೋಷದಿಂದ) ದೇವಿಯು ಹೇಳಿದಂತೆ. (ಸಾಗರಿಕೆಯ ಬಂಧನವನ್ನು ತೆಗೆದು ಹಾಕುತ್ತಾನೆ)

197 **ವಾಸವದತ್ತೆ**—ಆರ್ಯಪುತ್ರ, ತನಗೆ ತಿಳಿದಿದ್ದರೂ ನನಗೆ ಹೇಳದೆಯೇ ಇದ್ದ ಅಮಾತ್ಯ ಯೌಗಂಧರಾಯಣನು ಇಷ್ಟು ಕಾಲವೂ ನನ್ನನ್ನು ಕೆಟ್ಟವಳಾಗಿ ಮಾಡಿ ಬಿಟ್ಟಿದ್ದ !

198 (ಬಳಿಕ ಯೌಗಂಧರಾಯಣನು ಪ್ರವೇಶಿಸುತ್ತಾನೆ)

199 **ಯೌಗಂಧರಾಯಣ**—ನನ್ನ ಪ್ರಾರ್ಥನೆಯ ಮೇಲೆ ಮಹಾರಾಣಿಯು ಪತಿವಿರಹವನ್ನು ಸಹಿಸಲೊಪ್ಪಿದಾಗ, ಮಹಾರಾಜರಿಗೆ (ಪುನಃ) ಕಳತ್ರ ಸಂಘಟನೆಯಾದುದರಿಂದ ಅವಳು ತುಂಬಾ ದುಃಖಕ್ಕೊಳಗಾದಳು. (ಆದ್ದರಿಂದಲೇ) ತನ್ನ ಪ್ರಭುವಿಗೆ ದೊರೆತಿರುವ ಈ ಜಗತ್ಸ್ವಾಮಿತ್ವವು ಅವಳಿಗೆ ಸಂತೋಷವುಂಟುಮಾಡುತ್ತಿದೆಯಾದರೂ, ಲಜ್ಜೆಯಿಂದ ನಾನವಳಿಗೆ ಮುಖತೋರಿಸಲಾರೆ.

200 (ಕ್ಷಣಕಾಲ ಯೋಚಿಸಿ) ಅಥವಾ ಏನುಮಾಡಲಾಗುತ್ತೆ ? ಅತ್ಯಂತ ಮಾನನೀಯರಾದವರಲ್ಲೂ ಈ ರೀತಿ ಅನಾದರದಿಂದಿರುವುದು ಸ್ವಾಮಿಭಕ್ತಿ ವ್ರತ! (ಗಮನಿಸಿ) ಇಗೋ ಮಹಾರಾಜ! ಹತ್ತಿರ ಹೋಗುತ್ತೇನೆ. (ಹತ್ತಿರ ಹೋಗಿ)

ಮಹಾರಾಜರಿಗೆ ಜಯವಾಗಲಿ! ಮಹಾರಾಜ, ಅರಿಕೆ ಮಾಡದೆ ನಾನು ಮಾಡಿರುವುದನ್ನು ಮನ್ನಿಸೋಣವಾಗಲಿ!

201 **ರಾಜ**—ಹೇಳು, ಅರಿಕೆಮಾಡದೆ ಏನೇನು ಮಾಡಿದ್ದೀ?

202 **ಯೌಗಂಧರಾಯಣ**—ಮಹಾರಾಜರು ಆಸನ ಪರಿಗ್ರಹಿಸೋಣಾಗಲಿ. ಎಲ್ಲವನ್ನೂ ಅರಿಕೆಮಾಡುತ್ತೇನೆ. (ಎಲ್ಲರೂ ರಾಜನೊಡನೆ ತಮ್ಮ ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುತ್ತಾರೆ) ಮಹಾರಾಜ, ಕೇಳೋಣಾಗಲಿ. ಈ ಸಿಂಹಳೇಶ್ವರನ ಮಗಳ ಪಾಣಿಗ್ರಹಣ ಮಾಡುವವನು ಸಾರ್ವಭೌಮ ರಾಜನಾಗುವನು ಎಂದು ಸಿದ್ಧನೊಬ್ಬನು ನುಡಿದಿದ್ದನು. ಅದರ ಮೇಲಿನ ನಂಬಿಕೆಯಿಂದ ನಾವು ಮಹಾಸ್ವಾಮಿಯವರಿಗಾಗಿ ಅನೇಕ ಬಗೆಯಾಗಿ ಸಿಂಹಲೇಶ್ವರನಲ್ಲಿ ಪ್ರಾರ್ಥಿಸಿ ಕೊಂಡಾಗ್ಯೂ, ಮಹಾರಾಣಿ ವಾಸವದತ್ತೆಯ ಚಿತ್ತಕ್ಕೆ ಖೇದವಾಗುವುದನ್ನು ತಪ್ಪಿಸುವುದಕ್ಕಾಗಿ, ಆತನು ರಾಜಕುಮಾರಿಯನ್ನು ಕೊಡದಿರಲು—

203 **ರಾಜ**—ಆಗ ಏನು?

204 **ಯೌಗಂಧರಾಯಣ**—(ಲಜ್ಜೆಯಿಂದ) ಆಗ ಲಾವಾಣಕದ ಅಗ್ನಿಯಿಂದ ಮಹಾರಾಣಿಯು ಸುಟ್ಟು ಹೋದಳೆಂದು ಪ್ರಸಿದ್ಧಿಯನ್ನು ಹುಟ್ಟಿಸಿ ಬಾಭ್ರವ್ಯನನ್ನು ಆತನ ಬಳಿಗೆ ಕಳುಹಿಸಲಾಯಿತು.

205 **ರಾಜ**—ಯೌಗಂಧರಾಯಣ, ಅಲ್ಲಿಂದ ಮುಂದಿನದನ್ನು ನಾನು ಕೇಳಿದ್ದೇನೆ. ಆದರೆ ಯಾವ ಪ್ರಯೋಜನವನ್ನುದ್ದೇಶಿಸಿ ಈಕೆಯನ್ನು ದೇವಿಯ ಕೈಗೆ ಒಪ್ಪಿಸಿದೆ?

206 **ವಿದೂಷಕ**—ಅಯ್ಯೋ, ಇದನ್ನು ಹೇಳದಿದ್ದರೂ ತಿಳಿದೇ ತಿಳಿಯುತ್ತೆ—ಅಂತಃಪುರದೊಳಕ್ಕೆ ಸೇರಿದ ಈಕೆಯನ್ನು ಅಂತಃಪುರದೊಳಗಿರುವ ಮಹಾರಾಜನು ಅನಾಯಾಸವಾಗಿ ಕಾಣುವನು, ಎಂದು.

207 **ರಾಜ**—ಯೌಗಂಧರಾಯಣ, ನಿನ್ನ ಅಭಿಪ್ರಾಯವನ್ನೇ ವಸಂತಕ ಗ್ರಹಿಸಿದ್ದಾನೆಯೋ?

208 **ಯೌಗಂಧರಾಯಣ**—ಮಹಾರಾಜರು ಅಪ್ಪಣೆ ಕೊಡಿಸಿದಂತೆಯೆ.

209 **ರಾಜ**—ಇಂದ್ರಜಾಲಿಕ ವೃತ್ತಾಂತವೂ ನಿನ್ನ ಪ್ರಯೋಗವೇ ಎಂದು ಭಾವಿಸುತ್ತೇನೆ.

210 **ಯೌಗಂಧರಾಯಣ**—ಹಾಗಲ್ಲದಿದ್ದರೆ, ಅಂತಃಪುರದಲ್ಲಿ ಬಂಧಿತಳಾಗಿದ್ದವಳನ್ನು ಮಹಾರಾಜನು ನೋಡುವುದೆಂತು? ಕಣ್ಣಿಗೇ ಕಾಣಿಸದವಳನ್ನು

ವಸುಭೂತಿ ಗುರ್ತಿಸುವುದು ತಾನೇ ಹೇಗೆ? (ನಕ್ಕು) ಗುರುತು ತಿಳಿದ ತಂಗಿಯ ಬಗ್ಗೆ ಈಗ ಏನು ಮಾಡಬೇಕೆಂಬುವುದು ಮಹಾರಾಣಿಯವರಿಗೇ ಸೇರಿದ್ದು.

211 **ವಾಸವದತ್ತೆ** — (ನಗುತ್ತಾ) ಆರ್ಯ ಅಮಾತ್ಯ, ಸ್ಪಷ್ಟವಾಗಿಯೇ ಏಕೆ ಹೇಳುವುದಿಲ್ಲ— 'ರತ್ನಾವಳಿಯನ್ನು ಆರ್ಯ ಪುತ್ರನಿಗೆ ಒಪ್ಪಿಸು' ಎಂದು?

212 **ವಿದೂಷಕ**—ಪೂಜ್ಯಳೇ, ಅಮಾತ್ಯನ ಅಭಿಪ್ರಾಯ ನಿನಗೆ ಸ್ಪಷ್ಟವಾಗಿಯೇ ತಿಳಿದಿದೆಯಲ್ಲಾ!

213 **ವಾಸವದತ್ತೆ**—(ಕೈಚಾಚಿ) ಬಾ; ರತ್ನಾವಳಿ, ಬಾ. ತಂಗಿಗೆ ಅನುರೂಪವಾಗಿ ನನ್ನಿಂದ ಇಷ್ಟಾದರೂ ಆಗಲಿ. (ರತ್ನಾವಳಿಯನ್ನು ತನ್ನ ಆಭರಣಗಳಿಂದ ಅಲಂಕರಿಸಿ, ಕೈಹಿಡಿದುಕೊಂಡು ರಾಜನ ಬಳಿ ಹೋಗಿ) ಆರ್ಯಪುತ್ರ, ಈ ರತ್ನಾವಳಿಯನ್ನು ಅಂಗೀಕರಿಸು.

214 **ರಾಜ**—(ಹರ್ಷದಿಂದ ಎರಡುಕೈಗಳನ್ನೂ ನೀಡಿ) ದೇವಿಯ ಯಾವ ಪ್ರಸಾದವನ್ನು ಬಹುಮಾನಿಸೆನು? (ಸಾಗರಿಕೆಯ ಕೈ ಹಿಡಿದು ಕೊಳ್ಳುತ್ತಾನೆ)

215 **ವಾಸವದತ್ತೆ**—ಆರ್ಯಪುತ್ರ, ಈಕೆಯ ತೌರುಮನೆ ತುಂಬಾ ದೂರದಲ್ಲಿದೆ. ಆದ್ದರಿಂದ ಇವಳು ತನ್ನ ಬಂಧುಗಳಿಗಾಗಿ ಹಂಬಲಿಸದಂತೆ ನೋಡಿಕೋ. (ಎಂದು ಒಪ್ಪಿಸುತ್ತಾಳೆ)

216 **ರಾಜ**—ದೇವಿಯ ಅಪ್ಪಣೆಯಂತೆ.

217 **ವಿದೂಷಕ**—(ಹರ್ಷದಿಂದ ಕುಣಿಯುತ್ತಾನೆ) ಈಗ ಪ್ರಿಯವಯಸ್ಯನ ಕೈಗೆ (ಒಟ್ಟು) ಪೃಥ್ವಿಯೇ ಸಿಕ್ಕಿಬಿಟ್ಟಿತು!

218 **ವಸುಭೂತಿ** — ರಾಜಪುತ್ರಿ, ವಾಸವದತ್ತೆಯನ್ನು ಪ್ರಣಾಮದಿಂದ ಸನ್ಮಾನಿಸು. (ರತ್ನಾವಳಿಯು ಹಾಗೆಯೇ ಮಾಡುತ್ತಾಳೆ)

219 **ಬಾಭ್ರವ್ಯ**— ದೇವಿ, ನೀನು 'ದೇವೀ' ಶಬ್ದ ಪಡೆದಿರುವುದು ಸಾರ್ಥಕ.

220 **ಯೌಗಂಧರಾಯಣ**— ಈಗ ನನ್ನ ಪರಿಶ್ರಮ ಸಫಲವಾಯಿತು. ಪ್ರಭೋ, ನಿನಗೆ ಇನ್ನಾವ ಪ್ರಿಯವನ್ನಾಚರಿಸಲಿ, ಹೇಳು.

221 **ರಾಜ**—ಇದಕ್ಕಿಂತಲೂ ಪ್ರಿಯವಾದುದು ಇದೆಯೇ? ಯಾಕೆಂದರೆ—

222 ವಿಕ್ರಮಬಾಹುವು ನನ್ನ ಮಿತ್ರನಾಗಿಬಿಟ್ಟಿದ್ದಾನೆ. ಭೂತಲದಲ್ಲೇ ಸಾರತಮವಾದ ಮತ್ತು (ಸಮಗ್ರವಾದ) ಭೂಲೋಕ (ರಾಜ್ಯ) ಪ್ರಾಪ್ತಿಗೆ ಏಕಮಾತ್ರ ಕಾರಣಳಾದ ಈ ಸಾಗರಿಕೆ ನನಗೆ ಪ್ರಿಯೆಯಾಗಿ ದೊರೆತಿದ್ದಾಳೆ. ಮಹಾರಾಣಿಯೂ ತಂಗಿಯು ಲಭಿಸಿದುದರಿಂದ ಸಂತೋಷಗೊಂಡಿದ್ದಾಳೆ. ಕೋಸಲ

ರಾಜ್ಯವನ್ನೂ ಜಯಿಸಿದ್ದಾಗಿದೆ. ನೀನೇ ನನ್ನ ಅಮಾತ್ಯಶ್ರೇಷ್ಠನಾಗಿರುವಾಗ ನಾನು ಆಶಿಸಬಹುದಾದುದು ಯಾವುದು ತಾನೇ ನನ್ನಲ್ಲಿಲ್ಲ? ||೨೧||

ಆದರೂ, ಇದು ಇರಲಿ.

223 (ಭರತವಾಕ್ಯ)

224 ಇಂದ್ರನು ಬೇಕು ಬೇಕಾದಾಗ ಮಳೆಸುರಿಸುತ್ತಾ ಭೂಮಿಯು ಸಸ್ಯ ಸಮೃದ್ಧಿಯಿಂದಿರುವಂತೆ ಮಾಡಲಿ! ಬ್ರಾಹ್ಮಣಾಗ್ರೇಸರರು ಯಥಾವಿಧಿಯಾಗಿ ಯಾಗಗಳ ಮೂಲಕ ದೇವತೆಗಳಿಗೆ ಸಂತೋಷವುಂಟುಮಾಡಲಿ ! ಸಜ್ಜನರ ಸಹವಾಸವು ಕಲ್ಪಾಂತದವರೆಗೂ ಸುಖವನ್ನು ವೃದ್ಧಿಪಡಿಸುತ್ತಾ ಇರಲಿ. ದುಷ್ಟರ ದುರ್ಜಯವಾದ ವಜ್ರಗಾರೆಯಂತಿರುವ ಮಾತುಗಳು ನಿಃಶೇಷವಾಗಿ ಶಾಂತಿ ಹೊಂದಲಿ!

(ಎಲ್ಲರೂ ಹೋಗುತ್ತಾರೆ)

## ಇಂತು ಇಂದ್ರಜಾಲಿಕ ಎಂಬ ನಾಲ್ಕನೆಯ ಅಂಕ



ಶ್ರೀಹರ್ಷ ವಿರಚಿತವಾದ

## ರತ್ನಾವಳೀ ನಾಟಿಕೆಯು ಮುಗಿದುದು



# ಟಿಪ್ಪಣಿಗಳು

**ರತ್ನಾವಳೀ**— 'ರತ್ನಾವಳೀ' ಎಂಬ ಹೆಸರಿನ ನಾಯಿಕೆಯನ್ನು ಕುರಿತು ರಚಿಸಿದ **ನಾಟಿಕೆ**. ನಾಟಿಕೆಯ ಲಕ್ಷಣಗಳನ್ನು ಪೀಠಿಕೆಯಲ್ಲಿ ಕೊಡಲಾಗಿದೆ. ಆ ಎಲ್ಲ ಲಕ್ಷಣಗಳೂ ರತ್ನಾವಳಿಯಲ್ಲಿ ಇವೆ; ರತ್ನಾವಳಿಯನ್ನೇ ಮುಂದಿಟ್ಟು ಕೊಂಡು 'ನಾಟಿಕೆ' ಗಳ ಲಕ್ಷಣ ಗಳನ್ನು ಬರೆದಿದ್ದಾರೆಂದು ಹೇಳ ಬಹುದಾದಷ್ಟು ಸಂಪೂರ್ಣವಾಗಿವೆ.

ರತ್ನಾವಳಿಯ ಆದಿಯಲ್ಲಿ ಐದು ನಾಂದೀಶ್ಲೋಕಗಳಿವೆ. ಕೆಲವು ಮಾತೃಕೆಗಳಲ್ಲಿ ಮೂರು ಮತ್ತೆ ಕೆಲವಲ್ಲಿ ನಾಲ್ಕು ಶ್ಲೋಕ ಮಾತ್ರ ಇವೆ. ಆದಿಯಲ್ಲಿ ಮೂರಕ್ಕಿಂತ ಹೆಚ್ಚು ನಾಂದೀ ಶ್ಲೋಕಗಳಿರುವ ಸಂಸ್ಕೃತನಾಟಕಗಳು ವಿರಳ. ಒಂದಾದರೂ ನಾಂದೀ ಶ್ಲೋಕವಿದ್ದೇ ಇರ ಬೇಕೆಂಬ ನಿಯಮ ಇದೆ. ಇಷ್ಟದೇವತೆಯನ್ನು ಆನಂದಗೊಳಿಸಿ ಕೈಗೊಂಡ ಕಾರ್ಯವು ನಿರ್ವಿಘ್ನವಾಗಿ ಪರಿಸಮಾಪ್ತಿಗೊಳ್ಳುವಂತೆ ಮಾಡಿಕೊಳ್ಳಬೇಕೆಂಬುದೇ ಈ ನಾಂದೀಮಂಗ ಳದ ಉದ್ದೇಶ. ಈ ಮಂಗಳವು ಸ್ಥೂಲವಾಗಿ ಕಾಯಿಕ, ವಾಚಿಕ, ಮಾನಸಿಕ, ಎಂದು ಮೂರು ವಿಧ. ವಾಚಿಕವನ್ನು ಆಶೀಃ, ನಮಸ್ಕ್ರಿಯಾ. ವಸ್ತುನಿರ್ದೇಶ, ಎಂದು ವಿಂಗ ಡಿಸಬಹುದು. ಈ ನಾಟಕದ ಐದು ನಾಂದೀಶ್ಲೋಕಗಳೂ ಆಶೀರೂಪವಾದಾವು. ಸಾಹಿತ್ಯ ದರ್ಪಣ ನೋಡಿ — "ಆಶೀರ್ವಚನಸಂಯುಕ್ತಾ ಸ್ತುತಿರ್ಯಸ್ಮಾತ್ ಪ್ರಯುಜ್ಯತೇ। ದೇವದ್ವಿಜನೃಪಾದೀನಾಂ ತಸ್ಮಾನ್ನಾಂದೀತಿ ಸಂಜ್ಞಿತಾ॥" ಈ ನಾಂದೀ ಶ್ಲೋಕಗಳನ್ನು ಮೊದಲು ಒಬ್ಬ ಸೂತ್ರಧಾರ ಹೇಳುತ್ತಾನೆ. ಆಮೇಲೆ ಇನ್ನೊಬ್ಬ ಸೂತ್ರಧಾರನು, ('ಸ್ಥಾಪಕ' ಎಂದೂ ಅವನನ್ನು ಕರೆಯುತ್ತಾರೆ) ರಂಗದಮೇಲೆ ಬಂದು ಪ್ರಸ್ತಾವನೆಯನ್ನು ಆರಂಭಿ ಸುತ್ತಾನೆ. [ಪೂರ್ವರಂಗಂ ವಿಧಾಯಾದೌ ಸೂತ್ರಧಾರೇ ವಿನಿರ್ಗತೇ। ಪ್ರವಿಶ್ಯ ತದ್ವದಪರಃ ಕಾವ್ಯಮಾಸ್ಥಾಪಯೇನ್ನಟಃ ॥ ಸೂಚಯೇದ್ವಸ್ತು ಬೀಜಂ ವಾ ಮುಖಂ ಪಾತ್ರಮಥಾಪಿ ವಾ ॥ ಮತ್ತು — ಸ ಚ ಕಾವ್ಯಾರ್ಥಸ್ಥಾಪನಾತ್ (ಸೂಚನಾತ್) ಸ್ಥಾಪಕಃ। ] ನಾಟ್ಯೋ ಪಕರಣಗಳಿಗೆ ಸೂತ್ರ ಎಂದು ಹೆಸರು; ಅಂತಹ ಸೂತ್ರವನ್ನು ಧರಿಸಿರುವವನು ಸೂತ್ರಧಾರ ನಿಯಮ ಹೀಗಿದ್ದರೂ ದಕ್ಷಿಣದೇಶದ ನಾಟಕಗಳಲ್ಲಿ ಪ್ರಾಯಃ ಒಬ್ಬನೇ ಸೂತ್ರಧಾರ ನಾಂದಿ ಯನ್ನು ಹೇಳಿ, ಪ್ರಸ್ತಾವನೆಯನ್ನೂ ಆರಂಭಿಸುತ್ತಾನೆ. ಉದಾ.— ಭಾಸನ ನಾಟಕಗಳು, ಶಕ್ತಿಭದ್ರನ ಆಶ್ಚರ್ಯಚೂಡಾಮಣಿ ಮುಂತಾದುವು.

ಶ್ಲೋ. ೧. ಶಂಭುವನ್ನು ಪೂಜಿಸುವಾಗ—ಶಿವನು ಹಿಮಾಲಯದ ಶಿಖರದ ಮೇಲೆ ತಪಸ್ಸುಮಾಡುತ್ತಿದ್ದಾಗ, ಪಾರ್ವತಿಯು ಅವನ ಸೇವೆಗೆ ತನ್ನ ತಂದೆಯ ಅಪ್ಪಣೆಯ ಮೇಲೆ ನಿಂತಿದ್ದಳು. ಆ ಸಂದರ್ಭಕ್ಕೆ ಈ ಶ್ಲೋಕವನ್ನು ಅನ್ವಯಿಸಬೇಕೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಕಾಳಿದಾಸನ 'ಕುಮಾರಸಂಭವ ಕಾವ್ಯ' ದಲ್ಲಿ ಪಾರ್ವತಿ

ಯು ಪದ್ಮ ಬೀಜಗಳ ಮಾಲಿಕೆಯನ್ನು ಶಿವನಿಗೆ ಒಪ್ಪಿಸಿದುದಾಗಿಯೂ, ಅದನ್ನು ಅವನು ಕೈನೀಡಿ ಸ್ವೀಕರಿಸುವಾಗ ಅವನ (ಮೂರು) ಕಣ್ಣುಗಳೂ ಪಾರ್ವತಿಯ ಮುಖದಮೇಲೆ ಬಿದ್ದು ವೆಂದೂ, ಹೂಗಳನ್ನು ಪಾರ್ವತಿಯ ಸಖಿಯರಿಬ್ಬರು ಶಿವನ ಪಾದಗಳ ಮೇಲೆ ಸುರಿದರೆಂದೂ ವರ್ಣನೆ ಇದೆ.

ಮುದ್ರಾರಾಕ್ಷಸ ವೇಣೀಸಂಹಾರ ಮಾಲತೀಮಾಧವ ನಾಟಕಗಳಲ್ಲೂ ಇದೇ ಬಗೆಯ ನಾಂದೀಶ್ಲೋಕಗಳಿವೆ.

ರೋಮಾಂಚ, ಬೆವರು ಮೂಡುವುದು, ನಡುಕ ಇವು ಸಾತ್ವಿಕ (ಶೃಂಗಾರ) ಭಾವಗಳು. ವಿವರಗಳಿಗೆ ನಮ್ಮ ಇಂಗ್ಲೀಷು ನೋಟ್ಸ್ ನೋಡಿ.

ಶ್ಲೋ.೨. ವಿವಾಹವಾದಮೇಲೆ ಶಿವ-ಪಾರ್ವತಿಯರ ಪ್ರಥಮ ಸಮಾಗಮ ಸನ್ನಿವೇಶದ ವರ್ಣನೆ. ಈ ಶ್ಲೋಕದಲ್ಲಿ 'ಔತ್ಸುಕ್ಯ' ಎಂಬ ಶಬ್ದಪ್ರಯೋಗವು ದೋಷವಲ್ಲವೆಂಬ ವಿಚಾರಕ್ಕೆ ಕಾವ್ಯ ಪ್ರಕಾಶ ೭ ಕಾರಿಕೆ ೧೫ ರಲ್ಲಿರುವ ವಿವರಗಳನ್ನು ನೋಡಿ. ಅಲಂಕಾರ ಸ್ವಭಾವೋಕ್ತಿ; ಕೆಲವರ ಅಭಿಪ್ರಾಯದಲ್ಲಿ ಸಮಾಸೋಕ್ತಿ.

ಶ್ಲೋ.೩. ಮೊದಲನೆಯ ಮೂರು ಪಾದಗಳಿಗೂ ಎರಡು ಬೇರೆ ಬೇರೆ ರೀತಿ ಅರ್ಥ ಉಂಟು. ಒಂದು ಪಾರ್ವತಿಯು ಶಿವನಿಗೂ, ಇನ್ನೊಂದು ಲಕ್ಷ್ಮಿಯು ವಿಷ್ಣುವಿಗೂ ಹೇಳು ವಂತೆ, ಪದವಿಭಾಗದಲ್ಲಿ ಅಲ್ಪಸ್ವಲ್ಪ ಮಾರ್ಪಾಡಿನಿಂದ ಲಭಿಸುತ್ತದೆ. ಅನುವಾದ ನೋಡಿ

ಮಕರಧ್ವಜ=೧ ಮನ್ಮಥ ೨ ಸಮುದ್ರ. ಬಹುಮಾರ್ಗಗಾ=೧ ಗಂಗೆ (ತ್ರಿಪಥಗೆ) ೨ ಭೂಮಿ. ಕೃಷ್ಣಕಂಠ=ನೀಲಕಂಠ ಶಿವ. ಕೃಷ್ಣ=ಎಲೈ ಕೃಷ್ಣನೆ. ಕಂಠಗ್ರಹಂ=ಆಲಿಂಗನವನ್ನು. ನಮ್ಮ ಇಂಗ್ಲೀಷ್ ನೋಟ್ಸ್ ನೋಡಿ. ಸಮುದ್ರ ಮಥನದಿಂದ ವಿಷ್ಣುವಿಗೆ ಲಕ್ಷ್ಮಿಯು ದೊರೆತುದು ಪ್ರಸಿದ್ಧ. ಹಾಗೆಯೇ ಕಾಮದಹನವಾದುದೂ ಪಾರ್ವತಿಯಲ್ಲಿ ಶಿವನು ಮೋಹಗೊಳ್ಳುವಂತೆ ಮಾಡಲು ಕಾಮನು ಯತ್ನಿಸಿದುದರಿಂದ, ಎಂಬುದೂ ಸುಪ್ರಸಿದ್ಧ. ಮಥನ=೧ ನಾಶ ೨ ಕಡೆಯುವುದು.

ಶ್ಲೋ.೪. ದಕ್ಷಯಜ್ಞವನ್ನು ತಾನು ನಾಶಗೊಳಿಸಿದ ವೃತ್ತಾಂತವನ್ನು ಶಿವನು ತನ್ನ ಹೆಂಡತಿ ಪಾರ್ವತಿಗೆ ಬಣ್ಣಿಸಿ ಹೇಳುತ್ತಿರುವ ಸನ್ನಿವೇಶವಿದು. ಮೂರು ಅಗ್ನಿಗಳು—ಗಾರ್ಹಪತ್ಯ, ಆಹವನೀಯ ಮತ್ತು ದಕ್ಷಿಣಾಗ್ನಿ. ರಸ—ರೌದ್ರ.

ಶ್ಲೋ.೫. ಉಡುಪತಿ—ನಕ್ಷತ್ರರಾಜ ಚಂದ್ರ. 'ಭೂಮಿಯು ಸಸ್ಯಸಮೃದ್ಧಿ....' ಇದೇ ಅಭಿಪ್ರಾಯವನ್ನು ಭರತವಾಕ್ಯದಲ್ಲೂ ಕಾಣಬಹುದು. 'ದ್ವಿಜಶ್ರೇಷ್ಠರೂ....' ಇದನ್ನು ಭರತವಾಕ್ಯದ 'ಇಷ್ಟೈಸ್ತ್ರೈವಿಷ್ಟಪಾನಾಂ....' ಎಂಬುದರೊಡನೆ ಹೋಲಿಸಿ. ಈ ವಾಕ್ಯಗಳ ಆಧಾರದ ಮೇಲೆ ಶ್ರೀ ಹರ್ಷನು ಕಾಲಕ್ರಮದಲ್ಲಿ ಬೌದ್ಧ ಮತದ ಮೇಲಿನ

ಅಭಿಮಾನವನ್ನು ತೋರೆದು ವೈದಿಕಧರ್ಮದಲ್ಲೇ ಸಂಪೂರ್ಣ ಪ್ರತಿಪತ್ತಿಯುಳ್ಳವನಾಗಿದ್ದ ನೆಂದು ಹೇಳಲು ಅವಕಾಶವಿದೆ.

7 ವಸಂತೋತ್ಸವ—ವಸಂತಋತುವಿನಲ್ಲಿ ಪ್ರತಿವರ್ಷ ವೂಆಚರಿಸುವ ಹಬ್ಬ. ಇದನ್ನೇ 'ಮದನಮಹೋತ್ಸವ' ಎಂದೂ ಹೇಳಿರುವುದರಿಂದ ಪ್ರಾಯಃ ಇದು 'ಕಾಮನಹಬ್ಬ' ವೇ ಇರಬಹುದು. ಹಿಂದಿನ ಕಾಲದಲ್ಲಿ ಇಂತಹ ಉತ್ಸವಗಳ ಅಂಗವಾಗಿ ನಾಟಕಾಭಿನಯವೂ ನಡೆಯುತ್ತಿದ್ದಿರಬೇಕು. ನಾಟಿಕೆ— ೪ ಅಂಕಗಳುಳ್ಳ ಚಿಕ್ಕ ನಾಟಕ. ನಾಟಕವೆನ್ನಿಸಿಕೊ ಳ್ಳಬೇಕಾದರೆ ೫ ಅಂಕಗಳಾದರೂ ಇದ್ದೇ ಇರಬೇಕು. ವಿವರಗಳಿಗೆ ಪೀಠಿಕೆ ನೋಡಿ. 'ಅದೇ ದೊರೆಯ ಮೇಲಿನ ಗೌರವದಿಂದಾಗಲೀ' ಇದಕ್ಕೂ ಕಾಳಿದಾಸನ ವಿಕ್ರ ಮೋರ್ವಶೀಯದ 'ಪ್ರಣಯಿಷು ವಾ ದಾಕ್ಷಿಣ್ಯಾತ್ ಅಥವಾ ತದ್ವಸ್ತು ಪುರುಷಬಹುಮಾನಾತ್' ಎಂಬುದುಕ್ಕೂ ಸಾಮ್ಯ ಗಮನಿಸಿ.

8 ವತ್ಸರಾಜ ಚರಿತ—ಪೀಠಿಕೆಯಲ್ಲಿ 'ಕಥಾಮೂಲ' ವನ್ನು ನೋಡಿ.
ಸೂತ್ರಧಾರನ ಈ 5, 6, 7 ನೇ ಪ್ಯಾರಾಗಳಲ್ಲಿರುವ ಮಾತುಗಳು ಶ್ರೀಹರ್ಷನ ಮೂರು ನಾಟಕಗಳಲ್ಲೂ ಸನ್ನಿವೇಶಕ್ಕೆ ತಕ್ಕ ಅಲ್ಪ ಮಾರ್ಪಾಟುಗಳೊಡನೆ ಪುನರುಕ್ತವಾಗಿವೆ. ಈ 'ಶ್ರೀಹರ್ಷೋ ನಿಪುಣಃ ಕವಿಃ' ಎಂಬ ೬ ನೇ ಶ್ಲೋಕವನ್ನು ಪ್ರರೋಚನೆಗೆ ಉದಾ ಹರಣೆಯಾಗಿ ಸಾಹಿತ್ಯದರ್ಪಣದಲ್ಲಿ ಕೊಟ್ಟಿದ್ದಾರೆ.

9 ಸಂಗೀತಕ—ವಾದ್ಯಗೋಷ್ಠಿಯಿಂದ ಕೂಡಿದ ಹಾಡುಗಾರಿಕೆ. ಆರ್ಯೆ — ಹೆಂಡತಿ ಯನ್ನು ಆರ್ಯೆ ಎಂಬುದಾಗಿ ಸಂಬೋಧಿಸಬೇಕೆಂದು ನಾಟ್ಯಶಾಸ್ತ್ರದಲ್ಲಿ ಹೇಳಿದೆ— 'ಪತ್ನೀ ಚ+ಆರ್ಯಾ+ಇತಿ ಸಂಭಾಷ್ಯಾ.'

12 ದೇಶಾಂತರ—ದೊಡ್ಡ ನದಿ ಅಥವಾ ಸಮುದ್ರದಿಂದ ಬೇರ್ಪಟ್ಟಿರುವ ದೇಶ; 'ಮಹಾನದ್ಯಂತರಂ ಯತ್ರ ತದ್ಧಿ ದೇಶಾಂತರಂ ವಿದುಃ'

14 ದ್ವೀಪ—'ದ್ವಿರ್ಗತಾಃ ಆಪಃ ಅಸ್ಮಿನ್'. ಸೂತ್ರಧಾರನ ಈ ಮಾತುಗಳು ನಾಟಕ ದ ವಸ್ತುವಿನ ಸ್ಥೂಲ ಪರಿಚಯ ಮಾಡಿಕೊಡುತ್ತವೆ.

15 ಇವು ಯೌಗಂಧರಾಯಣನ ಮಾತುಗಳು. ಮುಂದೆ ೧೮ ನೋಡಿ.

17 ಪ್ರಸ್ತಾವನೆ— ಇದಕ್ಕೇ 'ಸ್ಥಾಪನೆ' 'ಆಮುಖ' ಎಂದೂ ಹೇಳುತ್ತಾರೆ. ಈ ಪ್ರಸ್ತಾವನೆಯು ಐದು ವಿಧ. ೧ ಉದ್ಘಾತಕ ೨ ಕಥೋದ್ಘಾತ ೩ ಪ್ರಯೋಗಾತಿಶಯ ೪ ಪ್ರವರ್ತಕ ೫ ಅವಗಲಿತ. ರತ್ನಾವಳಿಯ ಪ್ರಸ್ತಾವನೆ ಕಥೋದ್ಘಾತ ರೂಪವಾದುದು. ಏಕೆಂದರೆ ಸೂತ್ರಧಾರನ 'ದ್ವೀಪಾದನ್ಯಸ್ಮಾತ್....' ಎಂಬ ೨ ನೆಯ ಶ್ಲೋಕವನ್ನೇ ಹೇಳಿ ಕೊಂಡು ಯೌಗಂಧರಾಯಣನು ನಾಟಕದ ಆದಿಯಲ್ಲಿ ರಂಗದ ಮೇಲೆ ಬರುತ್ತಾನೆ.

18-23 ಯೌಗಂಧರಾಯಣನ ಏಕಪಾತ್ರಭಾಷಣ. ಇದೇ ಇಲ್ಲಿ ವಿಷ್ಕಂಭಕ. ಇದರ ಪ್ರಯೋಜನ ಮತ್ತು ಇತರ ವಿವರಗಳಿಗೆ ಪೀಠಿಕೆ ಪುಟ x-xii ನೋಡಿ.

18 ಇಲ್ಲದಿದ್ದರೆ (ಅನ್ಯಥಾ)—ವಿಧಿಯುಅನುಕೂಲವಾಗಿದ್ದು ನಮಗೆ ಅಭಿಮತವಾದ ಸಂಘಟನೆಯಾಗುವಂತೆ ಮಾಡದಿದ್ದರೆ. ಸಿದ್ಧಾದೇಶ—ಸಿದ್ಧಪುರುಷರು ಹೇಳಿರುವ ಮಾತು (ಭವಿಷ್ಯ). ಸಿಂಹಳರಾಜ ವಿಕ್ರಮಬಾಹುವಿನ ಮಗಳು ರತ್ನಾವಳಿಯನ್ನು ಮದುವೆಯಾಗುವವನು ಸಾರ್ವಭೌಮನಾಗುವನೆಂದು ಸಿದ್ಧರು ಹೇಳಿದ್ದ ಭವಿಷ್ಯದಲ್ಲಿ ನಂಬಿಕೆಯಿಂದ ತನ್ನ ಸ್ವಾಮಿ ವತ್ಸರಾಜನಿಗೆ ಅವಳನ್ನು ಮದುವೆ ಮಾಡಿಕೊಡಬೇಕೆಂದು ಸಿಂಹಳರಾಜನನ್ನು ಯೌಗಂಧರಾಯಣ ಪ್ರಾರ್ಥಿಸಿದ್ದನು. i v 202 ನೋಡಿ. ಪ್ರವಹಣ—ಹಡಗು, ನೌಕೆ. ಫಲಕ—ಹಲಗೆ. ಸಿಂಹಳ ಮತ್ತು ಲಂಕೆ ಎರಡೂ ಬೇರೆ ಬೇರೆ ಎಂಬುದಕ್ಕೆ 'ಜ್ಯೋತಿಸ್ತವ ನೋಡಿ—ದಕ್ಷಿಣೇ+ಅವಂತಿ-ಮಾಹೇಂದ್ರ-ಮಲಯಾ ಋಷ್ಯಮೂಕಕಾಃ। ಚಿತ್ರಕೂಟ-ಮಹಾರಣ್ಯ-ಕಾಂಚೀ-ಸಿಂಹಳ-ಕೊಂಕಣಾಃ ॥ ಕಾವೇರೀ-ತಾಮ್ರಪರ್ಣೀ ಚ ಲಂಕಾ ತ್ರಿಕೂಟಕಾದಯಃ ॥ ಪ್ರತ್ಯಭಿಜ್ಞಾನ—ಗುರುತು. ಬಾಭ್ರವ್ಯ—ವತ್ಸರಾಜನ ಕಂಚುಕಿ ರುಮಣ್ವಾನ್—ವತ್ಸರಾಜನ ಸೇನಾಪತಿ.

19 ಸ್ವೇಚ್ಛಾಚಾರೀ—ನನ್ನ ಸ್ವಾಮಿಯ ಸಮ್ಮತಿಯಿಲ್ಲದೆ ಸ್ವತಂತ್ರನಾಗಿ ವರ್ತಿಸುತ್ತಿರುವ ನಾನು. ಭೀತ ಏವಾಸ್ಮಿ......—ಪೀಠಿಕೆ ಪುಟ xxiii ಮತ್ತು xxxv ನೋಡಿ.

20 ಚರ್ಚರೀ=೧ ಒಂದು ಬಗೆಯ ಗಾನ ೨ ಕೈಚಪ್ಪಾಳೆ ೩ ಒಂದು ಬಗೆಯ ನಡಗೆ. ಮಹ—ಹಬ್ಬ. ಮದನಮಹ=ಮದನೋತ್ಸವ; ವಸಂತೋತ್ಸವ.

24 ವಿದೂಷಕ— ಪೀಠಿಕೆ ಪುಟ xxxii ನೋಡಿ. ವತ್ಸರಾಜಚರಿತೆಗೆ ಸಂಬಂಧಿಸಿದಂತೆ ರಚಿತವಾದ ಎಲ್ಲಾ ನಾಟಕಗಳಲ್ಲೂ ಈ ವಿದೂಷಕನ ಹೆಸರು ವಸಂತಕ ಎಂದೇ.

27 ಪ್ರದ್ಯೋತಸ್ಯ ಸುತಾ—ಪ್ರದ್ಯೋತನ ಮಗಳು ವಾಸವದತ್ತೆ. ಇತಿ—ಹೀಗೆ, ಈ ಆರು ಕಾರಣಗಳಿಂದ. ಈ ಶ್ಲೋಕಕ್ಕೂ ನಾಗಾನಂದ i ೭ ಮತ್ತು ಕಾದಂಬರೀ ೪೯ ನೇ ಪ್ಯಾರಾ ಆದಿಭಾಗಕ್ಕೂ ಇರುವ ಹೋಲಿಕೆ ಗಮನಿಸಿ.

28 ಇಲ್ಲಿ ಕಂಡು ಬರುವ ವಿದೂಷಕನ ವರ್ಣನಾಶಕ್ತಿ ಗಮನಾರ್ಹ. ಈ ಮದನಮಹೋತ್ಸವ ನಿನ್ನದೂ ಅಲ್ಲ.... ಪೀಠಿಕೆ ಪುಟ xxxii ನೋಡಿ.

30 ಶಾತಕುಂಭದ್ರವ— ಚಿನ್ನದದ್ರವ. (ಚಿನ್ನದ) ಶತಕುಂಭ ಪರ್ವತದಲ್ಲಿ ಉಂಟಾದುದು ಶಾತಕುಂಭ(=ಚಿನ್ನ)

31 ಪ್ರಾಂಗಣ—ಅಂಗಳ. ಕರ್ದಮ—ಕೆಸರು. ಪ್ರಮದಾಃ—ಪ್ರಾಯದಹೆಂಗಸರು

32 ಶೃಂಗಕ—ಜೀಕರ್ಣೀಳವೆ, ಪಿಚಕಾರಿ.

24 ಮನಾಕ್—ಸ್ವಲ್ಪ (ಅವ್ಯಯ). ಭುಜಂಗ= ೧ ಸರ್ಪ ೨ ವಿಟರು

36 ದ್ವಿಪದೀ(ಖಂಡ)—ತಾಳಬದ್ಧವಾಗಿ ಹಾಡಲನುಕೂಲವಾದ ಒಂದು ಬಗೆಯ ವೃತ್ತ ಈ ದ್ವಿಪದಿಯಲ್ಲಿ ನಾಲ್ಕುಬಗೆ—ಶುದ್ಧಾ ಖಂಡಾ ಚ ಮಾತ್ರಾ ಚ ಸಂಪೂರ್ಣಾ+ಇತಿ ಚತುರ್ವಿಧಾ । ದ್ವಿಪದೀ ಕರಣಾಖ್ಯೇನ ತಾಳೇನ ಪರಿಗೀಯತೇ ॥

37 ಪವನಕ—ಪವನ ಎಂಬುದರ ಅಲ್ಪಾರ್ಥಕರೂಪ.

38 ಯುವತೀಸಾರ್ಥಕಃ — ಯುವತಿಯರ ಗುಂಪು. ಬಕುಳ ಅಶೋಕ ಮುಂತಾದುವು ಸ್ತ್ರೀಸಂಪರ್ಕದಿಂದ ಪುಷ್ಪಿತವಾಗುವುವೆಂಬುದಕ್ಕೆ ನೋಡಿ—

ಸ್ತ್ರೀಣಾಂ ಸ್ಪರ್ಶಾತ್ ಪ್ರಿಯಂಗುಃ ವಿಕಸತಿ, ಬಕುಲಃ ಸೀಧುಗಂಡೂಷಸೇಕಾತ್.
ಪಾದಾಘಾತಾತ್ ಅಶೋಕಃ, ತಿಲಕಕುರಬಕೌ ವೀಕ್ಷಣಾಲಿಂಗನಾಭ್ಯಾಂ
ಮಂದಾರೋ ನರ್ಮವಾಕ್ಯಾತ್, ಪಟುಮೃದುಹಸನಾತ್ ಚಂಪಕಃ, ವಕ್ತ್ರವಾತಾತ್
ಚೂತಃ, ಗೀತಾತ್ ನಮೇರುಃ, ವಿಕಸತಿ ಚ ಪುರೋನರ್ತನಾತ್ ಕರ್ಣಿಕಾರಃ ॥

39 ಕಾಮನ ಕುಸುಮಬಾಣಗಳು ಐದು— ಅರವಿಂದಂ+ಅಶೋಕಂ ಚ ಚೂತಂ ಚ ನವಮಾಲಿಕಾ । ನೀಲೋತ್ಪಲಂ ಚ, ಪಂಚ+ಏತೇ ಪಂಚಬಾಣಸ್ಯ ಸಾಯಕಾಃ ॥

44 ಚರ್ಚರಿಕೆ—ಚೇಟಿಯರ ಗಾನವನ್ನು ಏನೂ ತಿಳಿಯದ ವಿದೂಷಕ ತಪ್ಪುತಪ್ಪಾಗಿ ಚರ್ಚರಿಕೆ ಎಂದು ನಿರ್ದೇಶಿಸುತ್ತಾನೆ.

46-50 ಇಲ್ಲಿನ ಹಾಸ್ಯ ಗಮನಿಸಿ. ಪೀಠಿಕೆ ಪು. xxxii ನೋಡಿ.

58 ಮೊದಲನೆಯ ಉತ್ಸವ ಮದನಮಹೋತ್ಸವ; ಅದರಿಂದ ಒದಗಿ ಬಂದ ಮತ್ತೊಂದು ಉತ್ಸವ ಮಹಾರಾಣಿಯು ಮನ್ಮಥಪೂಜೆ ನಡೆಸುವ ಕಾರಣದಿಂದ ರಾಜನಿಗೆ ದೊರಕುವ ಅವಳ ಸಹವಾಸ ಮತ್ತು ಸತ್ಕಾರ.

63-66 ಆ ವಸಂತಸಮಯದಲ್ಲಿ ಮಕರಂದೋದ್ಯಾನದ ಸೊಬಗು.

66 ಬೇರೆಬೇರೆ ಹೂಗಿಡಗಳು ಹೂಬಿಡಲು ಅಪೇಕ್ಷಿಸುವ ದೋಹದಗಳೂ ಬೇರೆಬೇರೆಯಾಗಿವೆ. ಟಿಪ್ಪಣಿ 38 ನೋಡಿ.

84, 90-3 ವ್ರತನಿಷ್ಠಳಾಗಿದ್ದ ವಾಸವದತ್ತೆಯ ವರ್ಣನೆ.

96 ಮೇಲಿನ 58ರೊಡನೆ ಹೋಲಿಸಿ. ನಮ್ಮ ಇಂಗ್ಲೀಷ್ ಟಿಪ್ಪಣಿ ನೋಡಿ.

97 ಸಾಗರಿಕೆ ರಾಜನನ್ನು ಹಿಂದೆಂದೂ ನೋಡಿರಲಿಲ್ಲವಾದ್ದರಿಂದಲೂ, ಮನ್ಮಥಪೂಜೆಮಾಡಲು ಬಂದಿದ್ದ ವಾಸವದತ್ತೆ ರಾಜನನ್ನು ಈಗ ಪೂಜಿಸುತ್ತಿರುವುದನ್ನು ಇದೇ ಮೊದಲಾಗಿ

ಕಂಡಿದ್ದರಿಂದಲೂ ರಾಜನೂ ಮನ್ಮಥಾಕಾರನಾಗಿಯೇ ಇದ್ದುದರಿಂದಲೂ ಅವನನ್ನು ಮನ್ಮಥನೆಂದೇ ತಿಳಿಯುತ್ತಾಳೆ. ಇದರಿಂದ ಅವಳ ಮುಗ್ಧಾವಸ್ಥೆ ಸೂಚಿತವಾಗುತ್ತೆ.

101 ವಿಲೋಭನ ಮತ್ತು ಉದ್ಭೇದಗಳಿಗೆ ಉದಾಹರಣೆಯಾಗಿ ಈ ಶ್ಲೋಕವನ್ನು ದಶರೂಪಕದಲ್ಲಿ ಕೊಟ್ಟಿದೆ. ವಿವರಗಳಿಗೆ ನಮ್ಮ ಇಂಗ್ಲೀಷ್ ಟಿಪ್ಪಣಿ ನೋಡಿ. ಈ ಶ್ಲೋಕ ಕೇಳಿದಮೇಲೆ ಸಾಗರಿಕೆಗೆ ಅಲ್ಲಿಯವರೆಗೆ ಪೂಜಿತನಾದವನು ಮನ್ಮಥನಲ್ಲ, ವತ್ಸರಾಜ ಎಂಬುದು ತಿಳಿಯುತ್ತೆ.

104 ಅಸ್ತಮನಕ್ಕೆ ಸರಿಯಾಗಿ ಪೂರ್ವದಿಕ್ಕಿನಲ್ಲಿ ಚಂದ್ರೋದಯವಾಗುವಂತೆ ಸೂಚಿಸಿ ಇರುವುದರಿಂದ, ಅಂದು ಹುಣ್ಣಿಮೆ.

107 ಉತ್ಪ್ರೇಕ್ಷೆ ಅಲಂಕಾರ.

## ಅಂಕ ೨

6 ಸಮುದ್ಗಕ—ಸಣ್ಣ ಪೆಟ್ಟಿಗೆ; ಬಣ್ಣದ ಕುಡಿಕೆ. ಫಲಕ—ಹಲಗೆ. ವರ್ತಿಕೆ—ಕುಂಚ; painting brush

8 ಕಮಲಾಕರವಾದ.... ಇದನ್ನು ಮುಂದಿನ 16 ಇಂತಹ ಕನ್ಯಾರತ್ನ.... ಎಂಬ ವಾಕ್ಯದೊಡನೆ ಹೋಲಿಸಿ

16 ಮೇಧಾವಿನೀ—೧. ಬುದ್ಧಿಶಾಲಿನಿ. ೨ ಶಾರಿಕೆ ಹಕ್ಕಿಯ ಹೆಸರು.

22 ನಮ್ಮ ಇಂಗ್ಲೀಷು ನೋಟ್ಸ್ ನೋಡಿ. ವಿಷಮಂ—ಸೆಡಸು.

24 ಮಂದುರಾ—ಮೃಗಶಾಲೆ; ಲಾಯ. 25 ವರ್ಷಧರ— ನಪುಂಸಕ; ಖೋಜಾ.

24-25 ಈ ಎರಡು ಶ್ಲೋಕಗಳೂ 'ಆರಭಟೀವೃತ್ತಿ'ಗೆ ಉದಾಹರಣೆಯಾಗಿ ದಶರೂಪಕದಲ್ಲಿ ಕೊಡಲ್ಪಟ್ಟಿವೆ. ನಮ್ಮ ಇಂಗ್ಲೀಷ್ notes ನೋಡಿ.

31 ಸಾಗರಿಕೆ ವಸಂತಕನನ್ನು ಕಂಡು 'ಮುಷ್ಟವಾನರ' ವೆಂದು ಭ್ರಮಿಸಬೇಕಾದರೆ ಅವನ ರೂಪ ಹೇಗಿತ್ತೆಂಬುದು ಸ್ಪಷ್ಟವಾಗುತ್ತೆ. ಶ್ರೀಹರ್ಷನ ನಾಗಾನಂದದಲ್ಲಿನ ವಿದೂಷಕನಿಗೆ 'ಕಪಿಲಮರ್ಕಟಿಕ' ಎಂಬ ಅಡ್ಡ ಹೆಸರಿತ್ತು.

36 ಇದು 'ಪತಾಕಾಸ್ಥಾನ'. ನಮ್ಮ ಇಂಗ್ಲೀಷು notes ನೋಡಿ.

38-39 ಮಣಿ ಮಂತ್ರ ಔಷಧಿಗಳಲ್ಲಿ ಸರ್ವತ್ರ ಅಚಲವಾದ ನಂಬಿಕೆಯಿದ್ದಕಾಲ ಅದು.

101-103 'ಈಕೆಯು ನಿನಗೆ ಆನಂದ ಉಂಟುಮಾಡುತ್ತಿದ್ದಾಳೋ? ಎಂದು ವಸಂತಕ ಕೇಳಿದ ಪ್ರಶ್ನೆಗೆ ರಾಜನ (99-100) ಉತ್ತರವನ್ನು ಕೇಳಿ ಸಾಗರಿಕೆ ಸಂತೋಷಪಟ್ಟು ಲಜ್ಜೆಯಿಂದ 103 ರಲ್ಲಿ 'ಸುಸಂಗತೆಯ ಚಿತ್ರಲೇಖನ ಸಾಮರ್ಥ್ಯದ ವರ್ಣನೆ ಅದು' ಎಂದು ತನ್ನ ಅಂತರಂಗ ಸಂತೋಷವನ್ನು ಮರೆಮಾಚುತ್ತಾಳೆ.

111 ಪರಿಣಾಹ—ವಿಸ್ತಾರ

115 'ನೀನು ಯಾರಿಗಾಗಿ ಬಂದೆಯೋ....' ಇಲ್ಲಿ 'ಯಾರಿಗಾಗಿ' ಎಂಬ ಶಬ್ದಕ್ಕಿರುವ ಎರಡರ್ಥಗಳನ್ನೂ ಗಮನಿಸಿ—೧ ರಾಜನಿಗಾಗಿ ೨ ಚಿತ್ರಫಲಕಕ್ಕಾಗಿ.

133 ಸಾಗರಿಕೆಯ ಮುಗ್ಧಾವಸ್ಥೆಯೇ ಇದಕ್ಕೆ ಕಾರಣ.

134-36 ಸಾಗರಿಕೆಯ ಅಸ್ಸಾಧ್ಯದೃಶವಾದ ರೂಪ.

143 ಇಲ್ಲಿ ಸಾಗರಿಕೆಯೇ ಲಕ್ಷ್ಮಿಯೆಂದೂ, ಅವಳ ಹಸ್ತವೇ ಅಮೃತವನ್ನು ಜಿನುಗಿಸುವ ಪಾರಿಜಾತದ ಚಿಗುರೆಂದೂ ರಾಜನು ಹೇಳುತ್ತಾನೆ. ಸಮುದ್ರ ಮಂಥನದಿಂದ ದೊರೆತ ೧೪ ರತ್ನಗಳ ಪೈಕಿ ಲಕ್ಷ್ಮಿ, ಪಾರಿಜಾತ ಮತ್ತು ಅಮೃತ ಇವು ಮೂರು. ನಾಯಕನೊಡನೆ ಪ್ರಥಮ ಸಮಾಗಮದಲ್ಲಿ ನಾಯಿಕೆಯ ಮುಖ ಕೈ ಮೊದಲಾದಕಡೆ ಬೆವರು ಕಾಣಿಸಿಕೊಳ್ಳುವುದು ಸಾತ್ವಿಕ ಶೃಂಗಾರಭಾವದಲ್ಲಿ ಗಣಿತವಾಗಿದೆ. 'ಕನ್ಯಾ ತು ಪ್ರಥಮಸಮಾಗಮೇ ಸ್ವಿನ್ನಾಂಗುಲಿಃ ಸ್ವಿನ್ನಮುಖೀ ಚ ಭವತಿ'—ಕಾಮಸೂತ್ರ. ೧೪ ರತ್ನಗಳು ಯಾವುವೆಂದರೆ—

ಲಕ್ಷ್ಮೀಃ ಕೌಸ್ತುಭ-ಪಾರಿಜಾತಕ-ಸುರಾಃ ಧನ್ವಂತರೀ+ಚಂದ್ರಮಾಃ
ಗಾವಃ ಕಾಮದುಘಾ ಸುರೇಶ್ವರಗಜಃ ರಂಭಾದಿ ದೇವಾಂಗನಾಃ ।
ಅಶ್ವಃ ಸಪ್ತಮುಖಃ ವಿಷಂ ಹರಿಧನುಃ ಶಂಖಃ+ಅಮೃತಂ ಚಾಂಬುಧೇಃ
ರತ್ನಾನೀಹ ಚತುರ್ದಶ ಪ್ರತಿದಿನಂ ಕುರ್ಯಾತ್ಸದಾ ಮಂಗಲಂ ॥

147 ವಿದೂಷಕನ ಮಾತಿನಲ್ಲಿರುವ ಹಾಸ್ಯ ಗಮನಿಸಿ.

150 ವಿದೂಷಕನ ಅಪ್ರಕೃತವಾದ ಈ ಮಾತು ಸಾಗರಿಕೆ ಅಲ್ಲಿಂದ ಹೊರಟುಹೋಗಲು ಕಾರಣವಾಗುತ್ತೆ. ಪೀಠಿಕೆ ಪುಟ xxxii ನೋಡಿ.

156 ಸಾಗರಿಕೆಯನ್ನು ರಾಜ ರತ್ನಾವಳಿಗೆ ಹೋಲಿಸಿದ್ದಾನೆ,— ಅವಳ ನಿಜವಾದ ಹೆಸರೂ ರತ್ನಾವಳಿಯೇ ಎಂಬುದನ್ನರಿಯದೆ. ರಾಗ=೧ ಹೊಳಪು, ಬಣ್ಣ ೨ ಅನುರಾಗ.

161 ಪ್ರಿಯತಮಾ—ಸಾಗರಿಕೆ. ಆದರೆ ದೂರದಿಂದ ಈ ಶಬ್ದವನ್ನು ಕೇಳಿ, ಆ ಸನ್ನಿವೇಶದ ಅರಿವಿಲ್ಲದೆ, ದೊರೆ ತನ್ನ ವಿಚಾರವನ್ನೇ ಆಡುತ್ತಿದ್ದಾನೆಂದು ವಾಸವದತ್ತೆ ಭಾವಿಸುತ್ತಾಳೆ.

169 ಹಾಗಾದರೆ ನಾವು ಗೆದ್ದೆವು—ಇಲ್ಲಿ ಗೆದ್ದದ್ದು ಎರಡು ವಿಚಾರಗಳಲ್ಲಿ-೧ ನವಮಾಲಿಕೆ ಕುಸುಮಿತವಾಗಿರುವುದು ೨ ವಾಸವದತ್ತೆ ಅವರನ್ನು ಬಿಟ್ಟು ಹೊರಟು ಹೋಗುತ್ತಿರುವುದು. ಇಲ್ಲಿ ವಿದೂಷಕನು ಅಜಾಗ್ರತೆಯಿಂದ ಕುಣಿದಾಡಿ ಚಿತ್ರಫಲಕವನ್ನು ಕೆಡುವುವುದು ಮುಂದೆ ಅನರ್ಥಕಾರಿಯಾಗಿ ಪರಿಣಮಿಸುವ ವಾಸವದತ್ತೆಯ ಕೋಪಕ್ಕೆ ಕಾರಣವಾಗುತ್ತದೆ. ಈ ಬಗೆಯ ಸನ್ನಿವೇಶ ವಿಕ್ರಮೋರ್ವಶೀಯ ಮತ್ತು ಮೃಚ್ಛಕಟಿಕಗಳಲ್ಲೂ ಇವೆ.

178 ಘುಣಾಕ್ಷರ— ಘುಣ = ಕುಟ್ಟೆ ಹುಳು. ಮರಗಳನ್ನು ಈ ಹುಳು ಕೊರೆಯು ವಾಗ ಮರದಮೇಲೆ ಅಕ್ಷರಗಳಂತೆ ಗುರುತುಗಳನ್ನು ಮಾಡಬಹುದು. ಇದು ಯಾದೃಚ್ಛಿಕವೇ ವಿನಾ ಉದ್ದಿಶ್ಯಪೂರ್ವಕವಾಗಿ ಮಾಡಿದುದಲ್ಲ. ಇಂತಹ ಯಾದೃಚ್ಛಿಕಗಳಿಗೆ ‹ಘುಣಾಕ್ಷರ ನ್ಯಾಯ' ಎಂದು ಹೆಸರು.

183 ವಿದೂಷಕ ಕೊಡುವ ಉಪಮಾನ ಎಷ್ಟು ಚೆನ್ನಾಗಿದೆ! ಪೀಠಿಕೆ ಪು. xxxiii ನೋಡಿ.

185 ಪ್ರಿಯದರ್ಶಿಕೆ iii ೧೩ರೊಡನೆ ಹೋಲಿಸಿ.

186 ಅರಣ್ಯರೋದನ—ವ್ಯರ್ಥವಾದ ಮಾತು.

## ಅಂಕ ೩

1 ಆಕಾಶದಲ್ಲಿ—ರಂಗಭೂಮಿಯ ಮೇಲಿಲ್ಲದ ಬೇರೆಯ ಪಾತ್ರದೊಡನೆ ಮಾಡುವ ಸಂಭಾಷಣೆಗೆ ಸೂಚನೆ. 'ಪರೋಕ್ಷಾಂತರಿತಂ ವಾಕ್ಯಂ ತತ್ **ಆಕಾಶೇ** ನಿಗದ್ಯತೇ'.

2 ಸಂಧಿವಿಗ್ರಹಚಿಂತೆ— ರಾಜ್ಯತಂತ್ರಗಳು ೬— ಯಾನ, ಆಸನ, ದ್ವೈಧ, ಆಶ್ರಯ ಸಂಧಿ ಮತ್ತು ವಿಗ್ರಹ. ಕಾಂಚನಮಾಲೆ ಪ್ರಯೋಗಿಸಿರುವ ಮಾತುಗಳಿಗೆ ಎರಡೆರಡು ಅರ್ಥ ಇವೆ— ಸಂಧಿ= ೧ ಕೌಲು ೨ ಸೇರುವುದು, ಸಂಧಿಸುವುದು. ವಿಗ್ರಹ — ೧ ಯುದ್ಧ ೨ ಜಗಳ, ವಾಗ್ವಾದ.

5 ಮಾತೆತ್ತಿದುದಕ್ಕೆಲ್ಲಾ 'ಆಣೆ' ಯಿಟ್ಟುಕೊಳ್ಳುವದು ನೀಚಪಾತ್ರಗಳಲ್ಲಿ ರೂಢಿ. ii 177 ರಲ್ಲಿ ವಿದೂಷಕನೂ ಹೀಗೆಯೇ ಆಣೆಯಿಟ್ಟುಕೊಳ್ಳುತ್ತಾನೆ.

20 ಪಂಚತ್ವ—ಪೃಥಿವೀ, ಅಪ್, ತೇಜಸ್, ವಾಯು, ಆಕಾಶ ಎಂಬ ಐದು ಮಹಾ ಭೂತಗಳಾಗಿ ಪರಿಣಮಿಸುವುದು; ಸಾವು; ಮರಣ.

21 ಕೌಶಾಂಬೀರಾಜ್ಯ— ಕೌಶಾಂಬೀನಗರವೇ ರಾಜಧಾನಿಯಾಗಿರುವ ವತ್ಸರಾಜ್ಯ.

28 ವಿದೂಷಕನ ಈ ಜಂಭವನ್ನೂ ಕೊನೆಯಲ್ಲಿ ಇವನ ಹಂಚಿಕೆಯೆಲ್ಲಾ ವಿಪರೀತವಲ್ಲಿ ಪರಿಣಮಿಸುವುದನ್ನೂ ಗಮನಿಸಿ.

32 ವಿದೂಷಕನ ವರ್ಣನಾಶಕ್ತಿಯನ್ನೂ ಸಂಧ್ಯಾವಧುವಿನ ಸಂಕೇತದ ಪ್ರಸಕ್ತಿಯ ಔಚಿತ್ಯವನ್ನೂ ಗಮನಿಸಿ.

34 ಸೂರ್ಯನ ರಥಕ್ಕೆ ಇರುವುದು ಒಂದೇ ಚಕ್ರ; ಏಳು ಕುದುರೆಗಳು; ಕಾಲುಗಳಿಲ್ಲದ ಸಾರಥಿ; ಇತ್ಯಾದಿ ಪ್ರಸಿದ್ಧಿಗೆ ಈ ಶ್ಲೋಕ ನೋಡಿ—

ರಥಸ್ಯೈಕಂ ಚಕ್ರಂ, ಭುಜಗಯಮಿತಾಃ ಸಪ್ತ ತುರಗಾಃ,
ನಿರಾಲಂಬೋ ಮಾರ್ಗಃ, ಚರಣರಹಿತಃ ಸಾರಥಿರಪಿ ।

ರವಿರ್ಯಾತ್ಯೇವಾಂತಂ ಪ್ರತಿದಿನಮಪಾರಸ್ಯ ನಭಸಃ,
ಕ್ರಿಯಾಸಿದ್ಧಿಃ ಸತ್ತ್ವೇ ಭವತಿ ಮಹತಾಂ ನೋಪಕರಣೇ ॥

48 ಶೇಮುಷೀ—ಗ ಬುದ್ಧಿ ತಿ ವೃಷ್ಟಿ 48-9 ರಾಜನು ತನ್ನ ನಡೆವಳಿಕೆ 'ಕಾಮಿ' ಯೆಂದು ನಿರೂಪಿಸುತ್ತಿದ್ದಾನೆ.

49 ಹೊಸಹೊಸ ಕಾಮಿನಿಯರ ಬಗ್ಗೆ ಕಾಮುಕರಿಗಿರುವ ಪಕ್ಷಪಾತಕ್ಕೆ ಕಾರಣ.

51 ಹೆಂಗಸು ತನ್ನ ಪ್ರಿಯನೊಡನೆ ಸಮಾಗಮಕ್ಕಾಗಿ ತಾನಾಗಿಯೇ ಹೋಗುವುದಕ್ಕೆ 'ಅಭಿಸಾರ' ವೆಂದೂ, ಅಂತಹ ಕಾಮಿನಿಗೆ 'ಅಭಿಸಾರಿಕೆ' ಎಂದೂ ಹೆಸರು.

66 ಇದು ಅನುಭವಸಿದ್ಧವಾದ ಸೂಕ್ತಿ.

73 ಭಟ್ಟಿಣೀ—ಅಭಿಷಿಕ್ತಳಾದ ರಾಣಿಯನ್ನು ಬಿಟ್ಟು ಉಳಿದ ರಾಜಪತ್ನಿಯರನ್ನು ಅವರ ಪರಿವಾರದವರು ಸಂಭೋಧಿಸುವಾಗ ಉಪಯೋಗಿಸುವ ಶಬ್ದ.

ರಾಜಾ ಭಟ್ಟಾರಕೋ ದೇವಃ, ತತ್ಸುತಾ ಭರ್ತೃದಾರಿಕಾ ।
ದೇವೀ ಕೃತಾಭಿಷೇಕಾಯಾಂ, ಇತರಾಸು ತು ಭಟ್ಟಿಣೀ ॥

ಇಲ್ಲಿ ವಾಸವದತ್ತೆ ಅಭಿಷಿಕ್ತಳಾಗಿರುವ ರಾಣಿ. ಅವಳನ್ನು ರಾಜನು 90ರಲ್ಲಿ 'ದೇವಿ' ಎಂದು ಸಂಭೋಧಿಸಿರುವುದು ನ್ಯಾಯವಾಗಿಯೇ ಇದೆ. ಅಲ್ಲಲ್ಲಿ 'ಭಟ್ಟಿಣೀ' ಎಂದು ಪ್ರಯೋಗವಾಗಿರುವುದು ಪಾಠದೋಷವಿರಬೇಕು. ಮುಂದೆ 100ರಲ್ಲಿ ವಿದೂಷಕನೂ 104, 107 ರಲ್ಲಿ ರಾಜನೂ ವಾಸವದತ್ತೆಯನ್ನು 'ದೇವಿ' ಎಂದೇ ನಿರ್ದೇಶಿಸುತ್ತಾರೆ.

77 ವಿದೂಷಕನು ಕೊಡುವ ಉಪಮಾನಗಳ ಔಚಿತ್ಯ ಗಮನಾರ್ಹ

83-88 ಇಲ್ಲಿರುವ ಪಾಠಭೇದಕ್ಕೆ ನಮ್ಮ ಇಂಗ್ಲೀಷು Notes ನೋಡಿ.

86 ಬೇರೆಯವಳಿಗೆ—ಸಾಗರಿಕೆಗೆ

92 ವಾಸವದತ್ತೆಯ ಒಳ್ಳೆಯ ಮನಸ್ಸು ಕಾಂಚನಮಾಲೆಗೇ ಏಕೆ, ಎಲ್ಲರಿಗೂ ಗೊತ್ತು. ಮುಂದೆ 106, 107 ನೋಡಿ.

95 II 183 ಮತ್ತು 186 ರೊಡನೆ ಹೋಲಿಸಿ

97 ವಾಸವದತ್ತೆಯಲ್ಲಿ ರಾಜನ ಪ್ರಣಯ ಎಷ್ಟು ಗಾಢವಾಗಿತ್ತೆಂಬುದು ಇಲ್ಲಿ ಅವನ ಮಾತಿನಿಂದಲೇ ತಿಳಿಯುತ್ತದೆ.

107 ಮಹಾನುಭಾವೆ—ಅದು ವಾಸವದತ್ತೆಯ ಸಹಜಗುಣ

113-114 ಈ ಮಾತು ಹೇಳುವಾಗ ರಾಜನು ಸಾಗರಿಕೆಯನ್ನು ವಾಸವದತ್ತೆಯೆಂದೇ ಭಾವಿಸಿದ್ದಾನೆ. 116ರಲ್ಲಿ ಅವಳು ಸಾಗರಿಕೆಯೆಂಬುದು ತಿಳಿಯುತ್ತೆ.

119 ವಿದೂಷಕನ ಈ ಮಾತನ್ನು II 183 ರೊಡನೆ ಹೋಲಿಸಿ.

124 ತನ್ನ ಗಂಡನಲ್ಲಿ ವಾಸವದತ್ತೆಗಿದ್ದ ನೈಜವಾದ ಪ್ರೇಮವನ್ನು ಗಮನಿಸಿ.

129 ವತ್ಸರಾಜನೇ ತನ್ನ ದ್ವಿಮುಖ ಪ್ರೀತಿಯ ಸ್ವರೂಪವನ್ನು ಇಲ್ಲಿ ಸಾಗರಿಕೆಯ ಮುಂದೆ ವಿವರಿಸುತ್ತಾನೆ.

136 ವಿದೂಷಕನು 74ರಲ್ಲಾಡಿದ ಮಾತುಗಳನ್ನು ಕಾಂಚನಮಾಲೆ ಈಗ ಅವನ ನೆನಪಿಗೆ ತರುತ್ತಿದ್ದಾಳೆ.

## ಅಂಕ ೪

1 ಈ ನಾಟಕದ ಕಥಾ ಸಂವಿಧಾನದಲ್ಲಿ ರತ್ನಾವಳಿಯ 'ರತ್ನಮಾಲೆ'ಗೆ ತುಂಬಾ ಪ್ರಾಧಾನ್ಯವಿದೆ. ನಮ್ಮ ಇಂಗ್ಲೀಷ್ ಪೀಠಿಕೆ ಪುಟ xxiv ಮತ್ತು xxv ನೋಡಿ.

15 ಜೀವದ ಗೆಳತಿ ಸುಸಂಗತೆಗೂ ಸಾಗರಿಕೆ ತನ್ನ ನಿಜಸ್ಥಿತಿಯನ್ನು ತಿಳಿಸುವುದಿಲ್ಲ. ಅಷ್ಟು ಗಟ್ಟಿ ಮನಸ್ಸು ಅವಳದು.

28 'ಅತಿಸ್ನೇಹಃ ಪಾಪಶಂಕೀ !

33 ಯಾವುದೋ ಕಾರಣದಿಂದ.... —ಈ ಕಾರಣವನ್ನು ರಾಜನು ಮುಂದೆ 34 ರಲ್ಲಿ ತಿಳಿಸುತ್ತಾನೆ.

59 ರಾಜನ ಶ್ಲಾಘ್ಯಗುಣವನ್ನು ಗಮನಿಸಿ, ಶತ್ರುವಿನ ಶೌರ್ಯವನ್ನೂ ಪ್ರಶಂಸಿಸುತ್ತಾನೆ

64 ಹಂಜೆ—ಚೇಟಿಯನ್ನು ಕರೆದು ಮಾತಾಡುವಾಗ ಉಪಯೋಗಿಸುವ ಸಂಬೋಧನೆ 'ಹಂಡೇ, ಹಂಜೇ, ಹಲಾ+ಆಹ್ವಾನೇ ನೀಚಾಂ ಚೇಟೀಂ ಸಖೀಂ ಪ್ರತಿ !' —ಅಮರ.

65, 68 ಇಂದ್ರಜಾಲ—ಇಂದ್ರನ ಜಾಲ, ಮಾಯೆ. ಇಂದ್ರನೇ ಇಂದ್ರಜಾಲದಲ್ಲಿ ಪ್ರಥಮ ಆಚಾರ್ಯ; ಅವನ ಬಳಿಕ ಶಂಬರ;—ಪ್ರದ್ಯುಮ್ನನನ್ನು ಸಮುದ್ರಕ್ಕೆಸೆದು, ಕೊನೆಗೆ ಅವನಿಂದಲೇ ಹತನಾದವನು.

72 ನಿನ್ನ ಮನಸ್ಸಿನಲ್ಲಿ ಏನೇನನ್ನು .... ಈ ಮಾತುಗಳಿಂದ 'ಸಾಗರಿಕೆಯನ್ನೂ ತೋರಿಸ ಬಲ್ಲೆ' ಎಂದು ಸೂಚಿಸುತ್ತಾನೆ.

75 ಮುಂದೆ ಕಾಂಚನಮಾಲೆ ಹೇಳುವಂತೆ, ಈ ಮಾತು ವಾಸವದತ್ತೆಗೆ ತೌರೂರಿನಮೇಲೆ ಇರುವ ಆದರವನ್ನು ತೋರಿಸುತ್ತದೆ.

85 ಇರಾ—ನೀರು. ಇರಾವಾನ್—ಸಮುದ್ರ. ಇರಾವತಿ ಭವಃ — ಸಮುದ್ರದಲ್ಲಿ ಹುಟ್ಟಿದ್ದು; ಐರಾವತ. ಸಮುದ್ರ ಮಥನದಿಂದ ದೊರೆತ 14 ರತ್ನಗಳಲ್ಲಿ ಒಂದು. ii 149 ಟಿಪ್ಪಣಿ ನೋಡಿ.

100 ಜಯಕುಂಜರ—ಜಯಾವಹಃ ಕುಂಜರಃ (ಜಯಗಳಿಸುವ ಆನೆ). ಯಸ್ಯಗಂಧಂ ಸಮಾಘ್ರಾಯ ನ ತಿಷ್ಠಂತಿ ಪ್ರತಿದ್ವಿಪಾಃ ॥ ತಂ ಗಂಧಹಸ್ತಿನಂ ಪ್ರಾಹುಃ ನೃಪತೇರ್ವಿಜಯಾವಹಂ ॥ ವತ್ಸರಾಜನ ರಾಜವೈಭವಗಳು ಸಿಂಹಳದ ಅಮಾತ್ಯನನ್ನೂ ಬೆರಗುಗೊಳಿಸುವಂತಿದ್ದುವು.

123 ಸಮುದ್ರದಿಂದ ಪಾರಾಗಿ ಬಂದ ವಸುಭೂತಿ ರುಮಣ್ವಂತನನ್ನು ಸೇರಿಕೊಂಡ ಮೇಲೆ ವಾಸವದತ್ತೆ ಲಾವಾಣಕದಲ್ಲಿ ಸುಟ್ಟುಹೋದದ್ದು ಸುಳ್ಳೆಂಬುದನ್ನರಿತಿರಬೇಕು.

157 iii 115 ರಲ್ಲೂ ಇದೇ ಮಾತು.

183 ರಾಜನಿಗೆ ತಿಳಿಸದೆಯೇ ಯೌಗಂಧರಾಯಣ ಮಾಡಿದ್ದ ಕೆಲಸವೆಂದರೆ ಈ ದ್ವಿತೀಯ ವಿವಾಹದ ಹಂಚಿಕೆಯೊಂದೇ.

195 ನೃಶಂಸವಾದ ಕಾರ್ಯ....ಸಾಗರಿಕೆಗೆ ಸಂಕಲೆಗಳನ್ನು ತೊಡಿಸಿ ಬಂಧಿಸಿದುದು.

198 ವಾಸವದತ್ತೆ ಯೌಗಂಧರಾಯಣನ ಹೆಸರನ್ನು ಇಲ್ಲಿ ಎತ್ತುವುದಕ್ಕೆ ಸರಿಯಾಗಿ ಅವನೇ ಅಲ್ಲಿಗೆ ಬರುತ್ತಾನೆ.

199 ಈ ಶ್ಲೋಕವನ್ನು I 19 ರೊಡನೆ ಹೋಲಿಸಿ. I 18-19 ರಲ್ಲಿನ ಯೌಗಂಧರಾಯಣನ ಏಕಪಾತ್ರ ಭಾಷಣದೊಡನೆ ಈ IV 199 ನ್ನೂ ಮುಂದಿನ ಅವನ ಮಾತುಗಳನ್ನೂ ಸೇರಿಸಿಕೊಂಡರೆ ಒಟ್ಟು ಕಥೆಯ ಸಿಂಹಾವಲೋಕನವಾಗುತ್ತೆ.

217 (ಒಟ್ಟು) ಪೃಥ್ವಿಯೇ ಸಿಕ್ಕಿಬಿಟ್ಟಿತು— ಸಾಗರಿಕಾಲಾಭವೇ ಅಷ್ಟು ಹೆಚ್ಚು ಆನಂದಮಯವಾಗಿತ್ತು. ಅದೂ ಅಲ್ಲದೆ ಸಿದ್ಧಾದೇಶದ ಪ್ರಕಾರ ಸಾಗರಿಕೆ(ರತ್ನಾವಳಿ)ಯ ಪತಿ ಸಾರ್ವಭೌಮನಾಗಬೇಕಲ್ಲವೇ !

222 ತನಗೆ ಒದಗಿ ಬಂದಿರುವ ಲಾಭ ವಿಶೇಷಗಳನ್ನೆಲ್ಲಾ ಇಲ್ಲಿ ರಾಜನೇ ವಿವರಿಸಿದ್ದಾನೆ.

223 ಭರತವಾಕ್ಯ—ನಾಟಕಗಳ ಕೊನೆಯಲ್ಲಿ ಬರುವ ಮಂಗಳ ಶ್ಲೋಕ. ನಾಟ್ಯಶಾಸ್ತ್ರ ಪ್ರಣೇತೃವಾದ ಭರತನಲ್ಲಿಟ್ಟಿರುವ ಗೌರವದಿಂದ ಈ ಶ್ಲೋಕಕ್ಕೆ ಆತನ ಹೆಸರನ್ನೇ ಇಡಲಾಗಿದೆ. ಇದೇ ಭರತವಾಕ್ಯ ಪ್ರಿಯದರ್ಶಿಕೆಯಲ್ಲೂ ಇದೆ. ಈ ಭರತವಾಕ್ಯಕ್ಕೂ ನಾಗಾನಂದದ ಭರತವಾಕ್ಯದ ಮೊದಲೆರಡು ಪಾದಗಳಿಗೂ ಅಭಿಪ್ರಾಯ ಸಾಮ್ಯವಿದೆ.

ಭರತವಾಕ್ಯದಲ್ಲಿ ಯಾವಾಗಲೂ ಸಾರ್ವತ್ರಿಕವಾದ ಶುಭವನ್ನು ಕೋರುವುದು ಸಂಪ್ರದಾಯ



# ನಮ್ಮ ಕೆಲವು ಪ್ರಕಟಣೆಗಳು

## ನಾಟಕಗಳು

**ನಾಗಾನಂದ**—ಶ್ರೀ ಹರ್ಷವಿರಚಿತ; ಸಂಸ್ಕೃತನಾಟಕದ ಕನ್ನಡ ಗದ್ಯಾನುವಾದ, ಪೀಠಿಕೆ, ಟಿಪ್ಪಣಿಗಳೊಡನೆ. 1 12

**ರತ್ನಾವಳೀ**—ಶ್ರೀ ಹರ್ಷವಿರಚಿತ; ಸಂಸ್ಕೃತ ನಾಟಕದ ಕನ್ನಡ ಗದ್ಯಾನುವಾದ, ಪೀಠಿಕೆ, ಟಿಪ್ಪಣಿ ಮುಂತಾದುವುಗಳೊಡನೆ 1 8

## ಕಾವ್ಯಗಳು

**ಬುದ್ಧಚರಿತೆ ಸರ್ಗ ೧.**—ಅಶ್ವಘೋಷವಿರಚಿತ; ಸಂಸ್ಕೃತ ಮೂಲ, ಕನ್ನಡ ಇಂಗ್ಲೀಷು ಅನುವಾದ, ಕನ್ನಡದ ಪ್ರತಿಪದಾರ್ಥ, ವ್ಯಾಕರಣವಿಚಾರ, ಟಿಪ್ಪಣಿಗಳೊಡನೆ 1 4

**ಕುಮಾರಸಂಭವ ಸರ್ಗ ೩** — ಕಾಳಿದಾಸವಿರಚಿತ; ಸಂಸ್ಕೃತಮೂಲ, ಕನ್ನಡ ಇಂಗ್ಲೀಷು ಅನುವಾದ, ಪೀಠಿಕೆ ಮುಂತಾದುವುಗಳೊಡನೆ 0 12

**ಬುದ್ಧಚರಿತೆ ಸರ್ಗ ೩** ಅಶ್ವಘೋಷವಿರಚಿತ; ಸಂಸ್ಕೃತಮೂಲ, ಕನ್ನಡ ಅನ್ವಯಾನುಸಾರ ಅರ್ಥ, ಇಂಗ್ಲೀಷು ಅನುವಾದ, ಪೀಠಿಕೆ, ಟಿಪ್ಪಣಿಗಳೊಡನೆ 1 4

**ರಘುವಂಶ ಸರ್ಗ ೧೩**—ಕಾಳಿದಾಸವಿರಚಿತ; ಸಂಸ್ಕೃತಮೂಲ, ಕನ್ನಡ ಅನ್ವಯಾನುಸಾರ ಅರ್ಥ, ಇಂಗ್ಲೀಷು ಅನುವಾದ, ಪೀಠಿಕೆ, ಟಿಪ್ಪಣಿಗಳೊಡನೆ 1 4

**ಅಮರ-ಶಬ್ದ-ಧಾತುರೂಪ**— ಪದ ಬಿಡಿಸಿ, ಹೊಸ ಮಾದರಿಯಲ್ಲಿ, ತಪ್ಪಿಲ್ಲದೆ ಮುದ್ರಿತವಾಗಿದೆ. 0 10

## ಸ್ತೋತ್ರಗ್ರಂಥಗಳು

**ಗದ್ಯತ್ರಯ**— ಶ್ರೀರಾಮಾನುಜಾಚಾರ್ಯವಿರಚಿತ, ಸಂಸ್ಕೃತಮೂಲ ಕನ್ನಡಲಿಪಿಯಲ್ಲಿ, ಪದವಿಭಾಗ, ಕನ್ನಡ ಗದ್ಯಾನುವಾದ, ಪೀಠಿಕೆ ಇತ್ಯಾದಿ

N.B.— ಕೆಲವೇ ಪ್ರತಿಗಳು ಉಳಿದಿರುವುದರಿಂದ ಸ್ತೋತ್ರಗ್ರಂಥ ಪ್ರಕಾಶಕ್ಕೆ ಐದು ರೂಪಾಯಿ ಸಹಾಯದ್ರವ್ಯ ಕೊಡುವವರಿಗೆ ಮಾತ್ರ ಉಚಿತ.

**ಶ್ರೀ ಗುಣರತ್ನಕೋಶ** ಶ್ರೀ ಪರಾಶರಭಟ್ಟವಿರಚಿತ; ಕನ್ನಡ ಪ್ರತಿಪದಾರ್ಥ, ತಾತ್ಪರ್ಯ, ಇಂಗ್ಲೀಷು ಅನುವಾದ ಸಹಿತ 0 5

**ಸ್ತೋತ್ರರತ್ನ (ಆಳವಂದಾರ್ ಸ್ತೋತ್ರ), ಕಾಂತಾ ಸ್ತೋತ್ರ** – ಯಾಮುನಾಚಾರ್ಯವಿರಚಿತ; ಮತ್ತು **ಶ್ರೀಲಕ್ಷ್ಮೀನೃಸಿಂಹ ಪಂಚಾಮೃತ ಸ್ತೋತ್ರ**— ಶ್ರೀರಾಮಕೃತ; ಕನ್ನಡ ಅನುವಾದ, ಪೀಠಿಕೆ ಮುಂತಾದುವುಗಳೊಡನೆ (ಸಚಿತ್ರ) 0 8

**ಶ್ರೀ ಅಹೋಬಿಲ ಮಠ ವೈಭವ** —ಶ್ರೀ ಅಹೋಬಿಲ ನರಸಿಂಹ ಕ್ಷೇತ್ರವೈಭವ ಮತ್ತು ಮಠದ ಚರಿತ್ರೆ (ಸಚಿತ್ರ) 1 0